ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ



ಶ್ರೀ ಕಲ್ಕಿಸಿಂಹಭಗವದ್ಭಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)



**೮ ನೆಯ ಸಂಚಿಕೆ**

ಅಷ್ಟಮ ಶತಕ

**(ಸವ್ಯಾಖ್ಯಾನ)**



ಬೆಂಗಳೂರು

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1931.

೧೦ ಸಂಚಿಕೆಗಳುಳ್ಳ
ಸಮಗ್ರ-ಪ್ರಬನ್ಧದ ಕ್ರಯ
ರೂ. 6-0-0.

ಈ ಸಂಚಿಕೆಯ ಬೆಲೆ
12 ಅಣೆ.

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ಅಷ್ಟಮಶತಕ)

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ—ವ್ಯಾಖ್ಯಾನಸಹಿತ.

ಶ್ರೀಹರ್ಷಾ ಜಯತಿ ಕಲ್ಕೀನ್ದ್ರಶ್ರೀ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ಅಷ್ಟಮಶತಕದಲ್ಲಿ—ಪ್ರಥಮದಶಕ.

### (ತೇವಿಮಾರಾವಾರ್)

(ಈದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಫಲಸಿದ್ಧಿಯಂ ಹೊಂದದೆ ಆಶ್ರಿತಪಾರತಂತ್ರ್ಯಾದಿಗುಣಗಳಲ್ಲಿ ವಿಶ್ವಾಸವಿಲ್ಲದವರಾಗಲು, ಕ್ರಮೇಣ ಭಗವನ್ತನಿಂದ ಪ್ರದರ್ಶಿತವಾದ ಕಲ್ಯಾಣಗುಣಗಳಿಂದ ಸನ್ತುಷ್ಟರಾಗುತ್ತಾರೆ)

(೧) ತೇವಿಮಾರಾವಾರ್ ತಿರುಮಕಳ್ ಪೂಮಿಯೇವ
ಮಱ್ಱಮರರಾಳ್ಚ್ಚೆಯ್ವಾರ್,
ಮೇವಿಯವುಲಕಮೂನ್ಱವೈ ಯಾಳ್ಚಿ ವೇಣ್ಡುವೇಣ್ಡುರುವ
ನಿನ್ನುರುವಮ್,
ಪಾವಿಯೇನ್ ತನ್ನೈ ಯಡುಕಿನ್ಱ ಕ್ಕಮಲಕ್ಕಣ್ಣದೋರ್
ಪವಳವಾಯ್ಮಣಿಯೇ,
ಆವಿಯೇ ಯಮುದೇ ಯಲೈಕಡಲ್ಕಡೈನ್ದವಪ್ಪನೇ
ಕಾಣುಮಾಱರುಳಾಯ್.

ಪ್ರ|| ತೇವಿಮಾರ್ ಆವಾರ್ - (ನಿನ್ನ ಐಶ್ವರ್ಯ ಸೌನ್ದರ್ಯಾದಿಗಳಿಗೆ ತಕ್ಕ) ಪತ್ನಿಯರಾದವರು, ತಿರುಮಕಳ್ - ಲಕ್ಷ್ಮೀದೇವಿಯೂ, ಪೂಮಿ-ಭೂದೇವಿಯೂ, ಮತ್ತು ಏವ-ಮತ್ತೂ ನಿನ್ನ ಆಜ್ಞಾನುಸಾರ, ಆಳ್ ಶೆಯ್‌ವಾರ್ - ಕೈಂಕರ್ಯ ಮಾಡುವವರೂ, ಅಮರರ್-ನಿತ್ಯಸೂರಿಗಳೂ, ಮೇವಿಯ-ಪರಸ್ಪರ ಹೊಂದಿಕೊಂಡಿರುವ, ಮೂನ್ರವೈ-ತ್ರಿವಿಧ ಚೇತನವರ್ಗವುಳ್ಳ, ಉಲಕಮ್-ಲೋಕಗಳನ್ನು, ಆಳ್ಗೈ-ಆಳುವುದಕ್ಕೆ ತಕ್ಕ, ವೇಣ್ಡು ವೇಣ್ಡು ಉರುವಮ್-ಬೇಕಾದ ಬೇಕಾದ ರೂಪಗಳೂ, ನೀ ಉರುವಮ್-ನಿನ್ನ ರೂಪಗಳಾಗಿವೆ. (ಇಷ್ಟೇ ಅಲ್ಲದೆ) ಪಾವಿಯೇನ್ ತನ್ನೈ-ಪಾಪಿಯಾದ ನನ್ನನ್ನು, ಅಡುಕಿನ್ರ-ಹಿಂಸಿಸುವ, ಕಮಲ-ತಾವರೆಯಂತೆ ಇರುವ, ಕಣ್ಣದು-ಕಣ್ಣುಗಳುಳ್ಳ, ಓರ್ ಪವಳವಾಯ್ - ಅದ್ವಿತೀಯವಾದ ಹವಳದಂತೆ ಇರುವ ಅಧರ ಪುಟವುಳ್ಳ, ಮಣಿಯೇ-ನೀಲರತ್ನವೇ, ಆವಿಯೇ-ಆತ್ಮಸ್ವರೂಪಿಯೇ, ಅಮುದೇ-ಅಮೃತದಂತೆ ಭೋಗ್ಯವಸ್ತುವೇ, ಅಲೈಕಡಲ್ ಕಡೈನ್ದ-ಅಲೆಗಳುಳ್ಳ ಸಮುದ್ರವನ್ನು ಕಡೆದ, ಅಪ್ಪನೇ-ಉಪಕಾರಕನಾದ ಸ್ವಾಮಿಯೇ, ಕಾಣುಮ್ ಆಱು - (ನಿನ್ನನ್ನು) ಕಂಡು ಅನುಭವಿಸುವ ಪ್ರಕಾರವನ್ನು, ಅರುಳಾಯ್-ಕೃಪೆಯಿಂದ ಹೇಳು.

( ಸ-ಗಾ-ರ || ) —

ದೇವ್ಯಸ್ತೇ ಶ್ರೀಶ್ಚ ಭೂಮಿಸ್ತದಿತರಮಹಿಷೀವರ್ಗ ಏವಂ ಚ ದಿವ್ಯಾ-
ಸ್ಸೂರೀನ್ದ್ರಾಃ ಕಿಙ್ಕರಾಸ್ತೇ ತ್ರಿಭುವನಮಪಿ ತತ್ಪಾಲನಾರ್ಹಾಶ್ಚ ದೇಹಾಃ |
ಸರ್ವಾಣೀಮಾನಿ ರೂಪಾಣ್ಯಹಹ! ತವ ಸರೋಜಾಕ್ಷ! ಬಿಮ್ಬಾಧರ! ತ್ವಂ
ಮೇ ಭಾಸ್ವ್ಯಾತ್ಮಾ ಚ ರತ್ನಂ ಶುಭಮಮೃತಮಹೋ! ತ್ವಾಂ
ದಿದೃಕ್ಷೇಽಬ್ಧಿಮನ್ಥ! ||

ತಾ|| ನಿನ್ನ ಐಶ್ವರ್ಯ ಸೌನ್ದರ್ಯಾದಿಗಳಿಗೆ ತಕ್ಕ ಪತ್ನಿಯರು ಶ್ರೀದೇವಿ ಭೂದೇವಿಗಳು; ಮತ್ತು ನಿನ್ನ ಆಜ್ಞಾನುಸಾರ ಕೈಂಕರ್ಯ ಮಾಡುವವರು ನಿತ್ಯಸೂರಿಗಳು. ತ್ರಿವಿಧಜಗದ್ರಕ್ಷಣಕ್ಕೆ ತಕ್ಕ ರೂಪಗಳೆಲ್ಲಾ ನಿನ್ನ ರೂಪಗಳು. ಪಾಪಿಯಾದ ನನ್ನನ್ನು ಕ್ಲೇಶಪಡಿಸುವಂತೆ ದಿವ್ಯಸೌನ್ದರ್ಯವುಳ್ಳವನಾಗಿ ಕಮಲನೇತ್ರನಾಗಿಯೂ, ಪ್ರವಾಳಾಧರಪುಟಯುಕ್ತನಾಗಿಯೂ ಇರುವ ನೀಲರತ್ನವೇ! ಆತ್ಮಸ್ವರೂಪನೇ! ಅಮೃತವೇ! ಸಮುದ್ರಮಥನವಂ ಮಾಡಿದ ಸ್ವಾಮಿಯೇ! ನಿನ್ನನ್ನು ಕಂಡು ಅನುಭವಿಸುವ ಪ್ರಕಾರವನ್ನು ಕೃಪೆಯಿಂದ ನನಗೆ ಹೇಳು.

(೨) ಕಾಣುಮಾಱರುಳಾಯೆನ್ಱೆನ್ಱು ಕಲಙ್ಗಿ ಕ್ಕಣ್ಣನೀರಲಮರ
ವಿನೈಯೇನ್,
ಪೇಣುಮಾಱೆಲ್ಲಾಮ್ ಪೇಣಿ ನಿನ್ಪೆಯರೇ
ಪಿದಱ್ಱುಮಾಱರುಳೆನಕ್ಕನ್ದೋ,
ಕಾಣುಮಾಱರುಳಾಯ್ ಕಾಕುತ್ತಾ ಕಣ್ಣಾ
ತೊಣ್ಡನೇನ್ ಕಱ್ಪಕಕ್ಕನಿಯೇ,
ಪೇಣುವಾರಮುದೇ ಪೆರಿಯತಣ್ಪುನಲ್ಶೂೞ್
ಪೆರುನಿಲಮೆಡುತ್ತ ಪೇರಾಳಾ.

ಪ್ರ|| ಕಾಣುಮಾಱು-(ನಾನು) ನಿನ್ನನ್ನು ಕಾಣುವಂತೆ, ಅರುಳಾಯ್-ಕೃಪೆಮಾಡು; ಎನ್ಱು ಎನ್ಱು-ಎಂದು ಹೇಳಿ ಹೇಳಿ, ಕಲಙ್ಗಿ-(ಕಾಣದೆ) ಮನಃಕ್ಷೋಭವಂ ಹೊಂದಿ, ಕಣ್ಣನೀರ್-ಕಣ್ಣುನೀರು, ಅಲಮರ-ಹರಡಿಕೊಂಡಿರಲು, ವಿನೈಯೇನ್-ಪಾಪಿಯಾದ ನಾನು, ಪೇಣುಮ್ ಆಱೆಲ್ಲಾಮ್-ಆದರಿಸುವ ಪ್ರಕಾರದಲ್ಲೆಲ್ಲಾ, ಪೇಣಿ-ಆದರಿಸಿ, ನಿನ್ ಪೆಯರೇ-ನಿನ್ನ ನಾಮಗಳನ್ನೇ, ಪಿದಱ್ಱುಮ್ ಆಱು-ಕೀರ್ತನಮಾಡಿ ಉದ್ಘೋಷಿಸುವಂತೆ, ಎನಕ್ಕು-ನನಗೆ, ಅರುಳ್ - (ನೀನು ಮಾಡಿದ) ಕೃಪೆಯು, ಅನ್ದೋ-ಅಯ್ಯೋ! (ಆದುದರಿಂದ) ಕಾಕುತ್ತಾ-ಕಾಕುತ್ಸ್ಥನೇ! ಕಣ್ಣಾ-ಕೃಷ್ಣನೇ! ತೊಣ್ಡನೇನ್-ಚಪಲನಾದ ನನಗೆ, ಕಱ್ಪಕ-ಕಲ್ಪವೃಕ್ಷದಂತೆ ಉದಾರನೇ! ಕನಿಯೇ-ಪಕ್ವಫಲದಂತೆ ಮಧುರವಾದವನೇ! ಪೇಣುವಾರ್-ಆಶೆಯುಳ್ಳವರಿಗೆ, ಅಮುದೇ-ಅಮೃತಸ್ವರೂಪನೇ! ಪೆರಿಯ-ಅಪಾರವಾದ, ತಣ್-ಶೀತಳವಾದ, ಪುನಲ್-ಪ್ರಳಯ ಜಲದಲ್ಲಿ, ಶೂೞ್-ಮಗ್ನವಾಗಿರುವ, ಪೆರುನಿಲಮ್ - ಮಹಾಪೃಥಿವಿಯನ್ನು, ಎಡುತ್ತ - ಉದ್ಧರಿಸಿದ, ಪೇರಾಳಾ-ಮಹಾಪುರುಷನೇ! ಕಾಣುಮಾಱು - ನಿನ್ನನ್ನು ಕಂಡು ಅನುಭವಿಸುವ ಪ್ರಕಾರವನ್ನು, ಅರುಳಾಯ್-ಕೃಪೆಯಿಂದ ಹೇಳು.

( ಸ-ಗಾ-ರ || )—

ದೇಹಿ ತ್ವದ್ದರ್ಶನಂ ಮೇ ಸಪದಿ ಕರುಣಯೇತ್ಯರ್ಥಿರೂಪೋಽಪಿ ಪಾಪೀ
ಸಾಶ್ರುಶ್ಶ್ಲಾಘ್ಯಾದೃತ್ಯ ಚ ತ್ವಾಂ ಮುಹುರವದಮಹಂ ಹನ್ತ! ನಾಮಾನಿ ತೇತ್ರ|
ಕಿಂ ವೇದೃಕ್ ತೇ ಕೃಪಾ ಮಯ್ಯಹಹ! ರಘುಪತೇ! ಕೃಷ್ಣ! ಮೇ ಕಲ್ಪಕಸ್ತ್ವಂ
ಸಿದ್ಧಂ ಪಕ್ವಂ ಫಲಂ ಚಾಮೃತಮವನಿಧರ! ತ್ವಾಂ ತು ವೀಕ್ಷೇ ಕಥಂ ವಾ? ||

ತಾ|| "ನಿನ್ನನ್ನು ಕಾಣುವಂತೆ ಕೃಪೆಮಾಡು" —ಎಂದು ಹೇಳಿ ಹೇಳಿ, ಕಾಣದೆ ಮನಃಕ್ಷೋಭವಂ ಹೊಂದಿ, ಕಣ್ಣು ನೀರು ಹರಡಿಕೊಂಡಿರಲು, ಪಾಪಿಯಾದ ನಾನು ನಿನ್ನ ನಾಮಗಳನ್ನೇ ಅತ್ಯಾದರದಿಂದ ಕೀರ್ತನಮಾಡಿ ಉದ್ಘೋಷಿಸುವಂತೆ ನೀನು ನನಗೆ ಕೃಪೆಮಾಡಿರುತ್ತೀಯೆ. ಅಯ್ಯೋ! ಕಾಕುತ್ಸ್ಥನೇ! ಕೃಷ್ಣನೇ! ಚಪಲನಾದ ನನಗೆ ಕಲ್ಪವೃಕ್ಷದಂತೆ ಉದಾರನೇ! ಪಕ್ವಫಲರೂಪನೇ! ಅಮೃತಸ್ವರೂಪನೇ! ಪ್ರಳಯಜಲದಿಂದ ಭೂಮಿಯನ್ನು ಉದ್ಧರಿಸಿದ ಮಹಾಪುರುಷನೇ! ನಿನ್ನನ್ನು ಕಾಣುವ ಪ್ರಕಾರವನ್ನು ನನಗೆ ತಿಳಿಸು.

(೩) ಎಡುತ್ತ ಪೇರಾಳನ್ ನನ್ದಗೋಪನ್
ತನ್ನಿನ್ನುಯಿರ್‌ಚ್ಚಿಱುವನೇ ಅಶೋದೈ
ಕ್ಕಡುತ್ತ ಪೇರಿನ್ಬಕ್ಕುಲವಿಳಙ್ಕಳಿಱೇ ಯಡಿಯನೇನ್
ಪೆರಿಯವಮ್ಮಾನೇ,
ಕಡುತ್ತ ಪೋರವುಣನುಡಲಿರುಪಿಳವಾ ಕೈಯುಕಿರಾಣ್ಡ
ವೆಙ್ಕಡಲೇ,
ಅಡುತ್ತದೋರುರುವಾಯಿನ್ಱು ನೀ ವಾರಾಯೆಙ್ಙನಮ್
ತೇಱುವರುಮರೇ.

ಪ್ರ|| ಎಡುತ್ತ-(ನಿನ್ನನ್ನು) ಎತ್ತಿಕೊಂಡ, ಪೇರಾಳನ್ – ಮಹನೀಯನಾದ, ನನ್ದಗೋಪನ್ ತನ್–ನನ್ದಗೋಪನಿಗೆ, ಇನ್ ಉಯಿರ್–ಭೋಗ್ಯವಾದ ಪ್ರಾಣರೂಪನಾದ, ಶಿಱುವನೇ-ಕುಮಾರನೇ, ಅಶೋದೈಕ್ಕು-ಯಶೋದಾದೇವಿಗೆ, ಅಡುತ್ತ-ಸಮಾಪಿಸಿದ, ಪೇರ್ ಇನ್ಬ–ನಿರತಿಶಯಾನನ್ದರೂಪಿಯಾದ, ಕುಲ – ಆ ಮಹಾ ಕುಲಕ್ಕೆ, ಇಳಮ್ ಕಳಿಱೇ-ಚಿಕ್ಕ ಆನೆಯಮರಿಯಂತೆ ಇರುವವನೇ, ಅಡಿಯನೇನ್-ದಾಸನಾದ ನನಗೆ, ಪೆರಿಯ–ದುರ್ಲಭನಾಗಿರುವ ಮಹಾಪುರುಷನಾದ, ಅಮ್ಮಾನೇ-ಸ್ವಾಮಿಯೇ, ಕಡುತ್ತ ಪೋರ್ – ಮಹಾ ಯುದ್ಧಾಭಿಲಾಷೆಯುಳ್ಳ, ಅವುಣನ್ – ಹಿರಣ್ಯಾಸುರನ, ಉಡಲ್–ಶರೀರವು, ಇರುಪಿಳವು ಆ–ಎರಡು ಸೀಳಾಗುವಂತೆ, ಕೈ ಉಕಿರ್–ಕೈ ಉಗುರು ಎಂಬ ಆಯುಧವನ್ನು, ಆಣ್ಡ–ಉಪಯೋಗಿಸಿದ, ಎಮ್ ಕಡಲೇ-(ಆಶ್ರಿತವಾತ್ಸಲ್ಯದಲ್ಲಿ) ನಮ್ಮ ಸಮುದ್ರಪ್ರಾಯನೇ, ನೀ-ನೀನು, ಇನ್ಱು-ಈ ದಿನ, ಅಡುತ್ತದು–ತಕ್ಕ, ಓರ್ ಉರುವಾಯ್ – ಒಂದು ರೂಪವುಳ್ಳವನಾಗಿ, ವಾರಾಯ್–ಬರುವುದಿಲ್ಲ. ಉಮರ್ – ನಿನಗೆ ಆಶ್ರಿತರಾದವರು, ಎಙ್ಙನಮ್–ಹೇಗೆತಾನೇ, ತೇಱುವರ್–ವಿಶ್ವಾಸಮಾಡುವರು ?

( ಸ-ಗಾ-ರ || )—

ಪ್ರಾಪ್ಯ ತ್ವಾಂ ನನ್ದಗೋಪಃ ಪೃಥುವಿಮಲಯಶಾಸ್ತಸ್ಯ ಸೂನುಃ ಪ್ರಿಯಸ್ತ್ವಂ
ಪ್ರಾಣಾತ್ಮಾ ವೈ ಯಶೋದಾಕುಲಮಣಿ-ಪರಮಾನನ್ದ-ಮತ್ತೇಭಡಿಮ್ಭಃ |
ವಿಷ್ಣುಸ್ಸ್ವಾಮೀ ಮಮ ತ್ವಂ ಖರನಖರ! ಹಿರಣ್ಯಾಕ್ಷವಕ್ಷೋವಿದಾರಿನ್!
ವಾತ್ಸಲ್ಯಾಬ್ಧೇ! ನ ಹಿ ತ್ವಂ ಭವಸಿ ಧೃತತನುಶ್ಚಾದ್ಯ! ಕೋ ವಿಶ್ವಸೇದ್ವಾ?||

ತಾ|| ನಿನ್ನನ್ನು ಶಿಶುವೆಂದು ಎತ್ತಿಕೊಂಡ ಮಹನೀಯನಾದ ನನ್ದಗೋಪನಿಗೆ ಪ್ರಾಣರೂಪಿಯಾದ ಕುಮಾರನೇ! ಯಶೋದಾದೇವಿಗೆ ನಿರತಿಶಯಾನನ್ದರೂಪಿಯಾದ ಗೋಪಕುಲ ಮತ್ತಗಜಪ್ರಾಯನೇ! ದಾಸನಾದ ನನಗೆ ದುರ್ಲಭನಾದ ಮಹಾಪುರುಷನೇ! ಮಹಾ ಯುದ್ಧಾಭಿಲಾಷೆಯುಳ್ಳ ಹಿರಣ್ಯಾಸುರನ ಶರೀರವು ಎರಡು ಸೀಳಾಗುವಂತೆ ನಖಾಯುಧವನ್ನು ಪ್ರಯೋಗಿಸಿದ ನಮ್ಮ ಆಶ್ರಿತವಾತ್ಸಲ್ಯ ಮಹಾಮ್ಬುಧಿಯೇ! ನೀನು ಆಗ ಬಂದಂತೆ ಈದಿನ ತಕ್ಕರೂಪದಿಂದ ನಮ್ಮ ಸಮೀಪಕ್ಕೆ ಬರುವುದಿಲ್ಲ. ನಿನ್ನ ಆಶ್ರಿತರು ಹೇಗೆ ನಿನ್ನಲ್ಲಿ ವಿಶ್ವಾಸಮಾಡುವರು?

(೪) ಉಮರುಕನ್ದುಕನ್ದ ವುರುವಮ್ ನಿನ್ನುರುವಮಾಕಿ
ಯುಙ್ ತನಕ್ಕನ್ಬರಾನಾರ್,
ಅವರುಕನ್ದಮರ್ನ್ದ ಶೆಯ್ಕೈಯುಙ್ಮಾಯ್ಯೈ
ಯಱಿವೊಣ್ಣಾ ಶಙ್ಕೈಪ್ಪುಙ್ ಪಿನ್ನೈಯೇನ್,
ಅಮರದುಪಣ್ಣಿ ಯಕಲಿಡಮ್
ಪುಡೈಶೂೞಡುಪಡೈಯವಿತ್ತ ವಮ್ಮಾನೇ,
ಅಮರರ್ತಮಮುದೇ ಯಶುರರ್ಕಳ್ನಞ್ಜೇ ಯೆನ್ನುಡೈ
ಯಾರುಯಿರೇಯೋ.

ಪ್ರ|| ಅದು – ಆ ಸುಪ್ರಸಿದ್ಧವಾದ, ಅಮರ್ – (ಭಾರತ) ಯುದ್ಧವನ್ನು, ಪಣ್ಣಿ – ಮಾಡಿ, ಅಕಲ್ – ವಿಸ್ತೀರ್ಣವಾದ, ಇಡಮ್‌ಪುಡೈ – ಭೂಮಿಯ ಪಾರ್ಶ್ವವೆಲ್ಲಾ, ಶೂೞ್ – ವ್ಯಾಪಿಸಿ ಇರುವ, ಅಡುಪಡೈ – ಸಂಹಾರಶಕ್ತಿಯುಳ್ಳ ಸೈನ್ಯವನ್ನು, ಅವಿತ್ತ–ನಾಶಪಡಿಸಿದ, ಅಮ್ಮಾನೇ–ಸ್ವಾಮಿಯೇ! ಅಮರರ್‌ತಮ್– (ಅನುಕೂಲರಾದ) ದೇವತೆಗಳಿಗೆ, ಅಮುದೇ-ಅಮೃತಸ್ವರೂಪನೇ!, ಅಶುರರ್‌ಕಳ್- (ಪ್ರತಿಕೂಲರಾದ) ಅಸುರರಿಗೆ, ನಞ್ಜೇ–ವಿಷರೂಪನೇ!, ಎನ್ನುಡೈ ಆರುಯಿರೇ– ನನ್ನ ಧಾರಕವಸ್ತುವಾದ (ಶ್ಲಾಘ್ಯವಾದ) ಆತ್ಮಭೂತನೇ!, ಉಮರ್ – ನಿನಗೆ ಶೇಷಭೂತರಾದವರು, ಉಕನ್ದು ಉಕನ್ದ – ಯಾವಾಗಲೂ ಅಭಿನನ್ದಿಸಿದ,

ಉರುವೆಮ್-ರೂಪವೇ, ನ್ಗಿ ಉರುವವಹಾಕಿ-ನಿನ್ನ ರೂಪವಾಗಿ, ಉಣತನಕ್ಕು-ನಿನಗೆ, ಅನ್ಬರ್ ಆನಾರ್ ಅವರ್-ಪ್ರೀತರಾದ ಭಕ್ತರು, ಉಕನ್ದು-ಆಶಿಪಟ್ಟು, ಆಮರ್ನ್ದ-(ಅನನ್ಯಪ್ರಯೋಜನರಾಗಿ) ಆಶ್ರಯಿಸಲು ಹೇತುವಾದ, ಶೆಯ್‌ಕೈ-ಕೃತ್ಯಗಳಾದ, ಉಣಮಾಯ್ಕೈ-ನಿನ್ನ ಆಶ್ಚರ್ಯಕರವಾದ ವ್ಯಾಪಾರಗಳನ್ನು, ಅಱಿವು ಒನ್ರುಮ್ - ತಿಳಿಯಬೇಕೆಂಬುದು ಒಂದನ್ನೇ, ಶಙ್ಗಾಪ್ಪೇ-ಚಿನ್ತಿಸುತ್ತಿದೇನೆ, ವಿನೈಯೇಣ-(ರಕ್ಷಕವಸ್ತುವಿನಲ್ಲೂ ಶಂಕೆಯುಳ್ಳವನಾಗುವಂತೆ) ಪಾಪಿಯಾದ ನಾನು ; ಓ-ಅಯ್ಯೋ !

( ಸ-ಗಾ-ಕೆ || )---

ಯುದ್ಧೇ ತತ್ರ ಧರಾತಲಾಖಿಲಚಮೂವಿಧ್ವಂಸಕ! ಶ್ರೀಹರೇ!
ದೇವಾನಾಮಮೃತಂ ತ್ವಮೇವ ಹಿ ವಿಷಂ ರಕ್ಷೋಗಣಾನಾಂ ನನು |
ಆತ್ಮಾ ತ್ವಂ ಮಮ! ಭಕ್ತಹೃದ್ಯಮಿಹ ಯತ್ತತ್ತೇ ವಪುರ್ಭಕ್ತಹೃತ್-
ಪ್ರೀತ್ಯುತ್ಕರ್ಷಕರೀ ಕ್ರಿಯಾ ತವ ಸದಾ! ಮಾಯಾಂ ನ ವೇದ್ಮ್ಯಜ್ಞಕಃ||

ತಾ|| ಆ ಭಾರತಯುದ್ಧವನ್ನು ಮಾಡಿ ವಿಸ್ತೀರ್ಣವಾದ ಭೂಮಿಯ ಎಲ್ಲಾ ಕಡೆಗಳಲ್ಲೂ ವ್ಯಾಪಿಸಿ ಇದ್ದ ಬಲಿಷ್ಠವಾದ ಸೈನ್ಯವನ್ನೆಲ್ಲಾ ನಾಶಪಡಿಸಿದ ಸ್ವಾಮಿಯೇ! ದೇವತೆಗಳಿಗೆ ಅಮೃತಪ್ರಾಯನೇ ! ಅಸುರರಿಗೆ ವಿಷರೂಪನೇ!, ನನ್ನ ಧಾರಕವಸ್ತುವಾದ ಆತ್ಮಸ್ವರೂಪನೇ! ನಿನಗೆ ಶೇಷಭೂತರಾದವರು ಅಭಿನನ್ದಿಸುವ ರೂಪವೇ ನಿನ್ನ ರೂಪವು. ನಿನ್ನ ಪ್ರೀತರಾದ ಭಕ್ತರು ಆಶಿಪಟ್ಟು ದಾಸವೃತ್ತಿಯಿಂದ ಆಶ್ರಯಿಸುವುದಕ್ಕೆ ಹೇತುವಾದ ಕೃತ್ಯಗಳೇ ನಿನ್ನ ಮಾಯಾ ಚೇಷ್ಟಿತಗಳು. ಇವುಗಳನ್ನು ತಿಳಿಯಲು ಪಾಪಿಯಾದ ನಾನು ಅಪೇಕ್ಷಿಸುತ್ತೇನೆ- ಅಯ್ಯೋ !

(೩) ಆರುಯಿರೇಯೋ ಅಕಲಿಡಮುಱುದುಮ್
ಪಡೈತ್ತಿಡನ್ದುಣ್ಡುಮಿಲ್ನ್ದಳನ್ದ
ಪೇರುಯಿರೇಯೋ ಪೆರಿಯನೀರ್ ಪಡೈತ್ತಙ್ಗುಱೈನ್ದದು
ಕಡೈನ್ದಡೈತ್ತುಡೈತ್ತ
ಶೀರಿಯರೇಯೋ ಮನಿಶರ್ಕ್ಕು ತ್ತೇವರ್ ಪೋಲ
ತ್ತೇವರ್ಕ್ಕುಮ್ ತೇವಾವೋ,
ಓರುಯಿರೇಯೋ, ಉಲಕಙ್ಗಳುಕ್ಕೆಲ್ಲಾಮುನ್ನೈ ನಾನೆಙ್ಗು
ವನ್ದುಱುಕೋ.

ಪ್ರ|| ಆರ್ ಉಯಿರೇ-ಪರಿಪೂರ್ಣವಾದ ಪ್ರಾಣರೂಪನೇ!, ಅಕಲಿಡಮ್-ವಿಶಾಲವಾದ ಭೂಮಿಯನ್ನು, ಮುೞುದುಮ್ ಪಡೈತ್ತು-ಸಮಗ್ರವಾಗಿ ಸೃಷ್ಟಿಸಿ, ಇಡನ್ದು-(ವರಾಹರೂಪಿಯಾಗಿ) ಮೇಲಕ್ಕೆ ಎತ್ತಿ, ಉಣ್ಡು - (ಪ್ರಳಯಕಾಲದಲ್ಲಿ) ಭಕ್ಷಿಸಿ, ಉಮಿೞ್ನ್ದು-(ಸೃಷ್ಟಿಕಾಲದಲ್ಲಿ) ಪುನಃ ಉದ್ಭವಿಸುವಂತೆಮಾಡಿ, ಅಳನ್ದ-(ತ್ರಿವಿಕ್ರಮರೂಪಿಯಾಗಿ) ಅಳೆದ, ಪೇರ್ ಉಯಿರೇ - ಸರ್ವಾಧಿಕನಾದ ಪರಮಾತ್ಮನೇ!, ಪೆರಿಯನೀರ್ ಪಡೈತ್ತು-ಮಹಾಜಲವಾದ ಏಕಾರ್ಣವವನ್ನು ಸೃಷ್ಟಿಸಿ, ಅಙ್ಗು ಉತ್ತುನ್ದು - ಅದರಲ್ಲಿ ಶಯನಮಾಡಿ, ಅದುಕಡೈನ್ದು - ಕ್ಷೀರಾಬ್ಧಿಯನ್ನು ಮಥನಮಾಡಿ, ಅಡೈತ್ತು-ಸೇತುಬನ್ಧನಮಾಡಿ, ಉಡೈತ್ತ-(ಸೇತುವೆಂಬ ಸ್ನಾನ ತೀರ್ಥವಾಗುವಂತೆ) ಧನುಷ್ಕೋಟಿಯಿಂದ ಹೊಡೆದ, ಶೀರಿಯರೇ-ಶ್ರೇಷ್ಠನಾದ ಪರಮಾತ್ಮನೇ!, ಮನಿಶರ್ಕ್ಕು ತೇವರ್ಪೋಲ-ಮನುಷ್ಯರಿಗೆ ದೇವಸ್ವರೂಪಿಯಾದಂತೆ, ತೇವರ್ಕ್ಕುಮ್ ತೇವಾವೋ-ದೇವತೆಗಳಿಗೂ ಸ್ವಾಮಿಯಾದವನೇ!, ಉಲಕಙ್ಗಳುಕ್ಕು ಎಲ್ಲಾಮ್-ಲೋಕಗಳಿಗೆಲ್ಲಾ, ಓರ್ ಉಯಿರೇಯೋ-ಒಂದೇ ಆತ್ಮನಾದವನೇ! ಉನ್ನೈನಾಃ ಎಙ್ಗು - ನಿನ್ನನ್ನು ನಾನು ಎಲ್ಲಿ, ವನ್ದು - ಬಂದು, ಉಱುಕೋ-ಆಶ್ರಯಿಸುವೆನು ?

( ಸ-ಗಾ-ರ || ) —

**ಪ್ರಾಣಾತ್ಮನ್! ಪೃಥಿವೀಂ ಸೃಜನ್ನಪಿ ವಹನ್ ಭುಕ್ತ್ವೋದ್ಗಿರನ್ ಮಾನಕೃತ್ ಸರ್ವೇಶಃ ಪ್ರಳಯಾರ್ಣವೇ ಚ ಶಯಿತೋ ಮನ್ಥೋಽಮ್ಬುಧೇಸ್ಸೇತುಕೃತ್| ತದ್ಭೇತ್ತಾ ಚ ಭವಾನ್ ಮಹಾನ್ ಕಿಲ ನೃಣಾಂ ದೇವೋಽಪಿ ದೇವಾಧಿಪೋ ಲೋಕಾನಾಮಪಿ ಚಾನ್ತರಾತ್ಮಕ ಇಹ ತ್ವಾಂ ಪ್ರಾಪ್ನುಯಾಂ ವಾ ಕಥಮ್?||**

ತಾ|| ಪೂರ್ಣವಾದ ಪ್ರಾಣಸ್ವರೂಪನೇ! ವಿಶಾಲವಾದ ಭೂಮಿಯನ್ನು ಸೃಷ್ಟಿಸಿ, ಉದ್ಧರಿಸಿ, ಭಕ್ಷಿಸಿ, ಪುನಃ ಉದ್ಭವಿಸುವಂತೆಮಾಡಿ, ಅಳೆದ ಸರ್ವೇಶ್ವರನೇ! ಮಹಾರ್ಣವವನ್ನು ಸೃಷ್ಟಿಸಿ ಅದರಲ್ಲಿ ಶಯನಮಾಡಿ, ಕ್ಷೀರಾಬ್ಧಿಮಥನವಂ ಮಾಡಿ, ಸೇತುಬಂಧನವಂಮಾಡಿ, ಧನುಷ್ಕೋಟಿಯಿಂದ ಹೊಡೆದು ತೀರ್ಥವಾಗುವಂತೆ ಮಾಡಿದ ಶ್ರೇಷ್ಠನಾದ ಪರಮಾತ್ಮನೇ, ಮನುಷ್ಯರಿಗೆ ದೇವರೂಪಿಯಾಗಿರುವ ಸರ್ವ ದೇವಾಧಿದೇವನೇ! ಸರ್ವಲೋಕಾನ್ತರಾತ್ಮನೇ! ನಿನ್ನನ್ನು ನಾನು ಎಲ್ಲಿ ಹೇಗೆ ಆಶ್ರಯಿಸುವೆನು?

(೫) ಎಙ್ಙವನ್ದುಱುಕೋ ವೆನ್ನೈ ಯಾಳ್ವಾನೇ
ಯೇೞುಲಕಙ್ಗಳುಮ್ ನೀಯೇ,
ಅಙ್ಗವರ್ಕ್ಕಮೈತ್ತ ತೇಯ್ವಮುಮ್ ನೀಯೇ
ಯವಱ್ಱಮೈಕರುಮಮುಮ್ ನೀಯೇ,
ಪೊಙ್ಗಿಯ ಪುಱಮ್ಬಾಲ್ ಪೊರುಳುಳವೇಲುಮವೈಯುಮೋರಾ
ನೀಯಿನ್ನೇ ಯಾನಾಲ್,
ಮಙ್ಗಿಯವರುವಾಮ್ ನೇರ್ಪ್ಪಮುಮ್ ನೀಯೇ
ವಾನ್ಪುಲನಿಱನ್ದದುಮ್ ನೀಯೇ.

ಪ್ರ॥ ಎನ್ನೈ ಆಳ್ವಾನೇ- ನನ್ನನ್ನು ಆಳುವ ಸ್ವಾಮಿಯೇ!, ಏೞುಉಲಕಙ್ಗಳುಮ್ ಸಪ್ತ (ಸರ್ವ) ಲೋಕಗಳೂ, ನೀಯೇ – ನೀನೇ (ನಿನಗೇ ವಶ್ಯವಾಗಿವೆ). ಅಙ್ಗು – ಆ ಲೋಕಗಳಲ್ಲಿ, ಅವರ್ಕ್ಕು – ಫಲಾಪೇಕ್ಷೆಯುಳ್ಳ ಉಪಾಸಕರಿಗೆ, ಅಮೈತ್ತ- ಕಲ್ಪಿಸಿದ, ತೇಯ್ವಮುಮ್ – ದೇವತಾವರ್ಗವೂ, ನೀಯೇ – ನೀನೇ (ನಿನಗೇ ವಶ್ಯವಾಗಿದೆ). ಅವಱ್ಱಮೈ–ಆ ದೇವತೆಗಳಿಗೆ ಸಮ್ಬನ್ಧಿಸಿದ, ಕರುಮಮುಮ್–ಆರಾಧನರೂಪವಾದ ಕರ್ಮವೂ, ನೀಯೇ – ನೀನೇ (ನಿನಗೇ ಸೇರಿದುದಾಗಿದೆ). ಪೊಙ್ಗಿಯ – (ಈ ಪ್ರಪಂಚಕ್ಕಿಂತ) ಶ್ರೇಷ್ಠವಾಗಿ ಪ್ರಕಾಶಿಸುವ, ಪುಱಮ್ಬಾಲ್ ಪೊರುಳ್- ಬಹಿರ್ಗತವಾದ ಮಹದಾದಿ ಸಮಸ್ತಪದಾರ್ಥಗಳೂ, ಉಳವೇಲುಮ್– ಪ್ರಮಾಣಸಿದ್ಧವಾಗಿದ್ದಾಗ್ಯೂ, ಅವೈಯುಮ್–ಅವುಗಳೂ, ನೀ- ನೀನೇ (ನಿನಗೇ ವಶ್ಯವಾಗಿವೆ). ಮಙ್ಗಿಯ – ನಾಮರೂಪರಹಿತವಾದ, ಅರುವಾಮ್ ನೇರ್ಪ್ಪಮುಮ್- ಸೂಕ್ಷ್ಮ ಚಿದಚಿದ್ವರ್ಗವೂ, ನೀಯೇ- ನೀನೇ (ನಿನಗೇ ವಶ್ಯವಾಗಿದೆ). ವಾನ್– ಪರಮಾಕಾಶದಲ್ಲಿ, ಪುಲನ್ ಇಱನ್ದದುಮ್- ಇನ್ದ್ರಿಯಾತೀತವಾದ ಮುಕ್ತಾತ್ಮವರ್ಗವೂ, ನೀಯೇ- ನೀನೇ (ನಿನಗೇ ವಶ್ಯವಾಗಿದೆ). ಇನ್ನೇ ಆನಾಲ್- ಈಪ್ರಕಾರ ಸರ್ವಾತ್ಮಭೂತನಾದರೆ, ಎಙ್ಙುವನ್ದು ಉಱುಕೋ- ನಾನು ಎಲ್ಲಿ ಬಂದು ನಿನ್ನನ್ನು ಸೇರುವೆನು?

( ಸ- ಗಾ–ರ ॥ )—

ಮನ್ನಾಥೋ ಜಗತಾಂ ಪ್ರಭುಶ್ಚ ಸಕಲಾ ಲೋಕಾಶ್ಚ ದೇವಾಃ ಕ್ರಿಯಾ
ಲೋಕಾತೀತಪದಾರ್ಥಜಾತಮಖಿಲಂ ತ್ವಂ ಸೂಕ್ಷ್ಮಚಿಚ್ಚಾಪ್ಯಚಿತ್ |
ಸರ್ವಂ ತ್ವಂ ಪರಮೇ ಪದೇಽಪಿ ವಿಲಸತ್ಸರ್ವೇನ್ದ್ರಿಯಾತ್ಯುದ್ಗತಂ
ತ್ವಾಮೇವಂ ಪರಮಾತ್ಮರೂಪಮನಘಂ ಮೂಢಃ ಕಥಂ ಪ್ರಾಪ್ನುಯಾಮ್?॥

ತಾ॥ ನನ್ನನ್ನು ಆಳುವ ಸ್ವಾಮಿಯೇ! ಸರ್ವಲೋಕಗಳಿಗೂ ನೀನೇ ಒಡೆಯನಾಗಿ, ನೀನೇ ಆ ಲೋಕಗಳಲ್ಲಿರುವ ಉಪಾಸಕರ ಆರಾಧ್ಯವಾದ ದೇವತಾವರ್ಗವೂ, ಆರಾಧನಕರ್ಮವೂ, ಮಹದಾದಿ ಸಮಸ್ತಪದಾರ್ಥಗಳೂ, ಸೂಕ್ಷ್ಮಚಿದಚಿದ್ವರ್ಗವೂ, ಮುಕ್ತಾತ್ಮವರ್ಗವೂ, ಸರ್ವಪದಾರ್ಥಗಳೂ ನೀನೇ ಎಂಬಂತೆ ಅವುಗಳಿಗೆಲ್ಲಾ (ಸ್ವಾಮಿಯಾಗಿ) ಅನ್ತರಾತ್ಮನಾಗಿ ಸರ್ವಾತ್ಮಭೂತನಾಗಿರುವುದರಿಂದ ನಿನ್ನನ್ನು ನಾನು ಎಲ್ಲಿ ಹೇಗೆ ಬಂದು ಸೇರುವೆನು?

(೨) ಇಱನ್ದದುವುಮ್ ನೀಯೇ ಯೆದಿರ್‌ನ್ದದುವುಮ್ ನೀಯೇ
ನಿಕೞ್ವದೋ ನೀಯಿನ್ನೇ ಯಾನಾಲ್,
ಶಿಱನ್ದ ನಿನ್ ತನ್ಮೈ ಯದುವಿದುವುದುವೆನ್ಱಱಿವೊನ್ಱುಮ್
ಶಙ್ಕಿಪ್ಪನ್ ವಿನೈಯೇನ್
ಕಱನ್ದಪಾಲ್ ನೆಯ್ಯೇ ನೆಯ್ಯಿನಿನ್ ಶುವೈಯೇ
ಕಡಲಿನುಳಮುದಮೇ ಅಮುದಿಲ್
ಪಿಱನ್ದವಿನ್ ಶುವೈಯೇ, ಶುವೈಯದುಪಯನೇ
ಪಿನ್ನೈತೋಳ್ ಮಣನ್ದಪೇರಾಯಾ.

ಪ್ರ॥ ಕಱನ್ದಪಾಲ್–ಆಗತಾನೇ ಕರೆದ (ಶುದ್ಧವಾದ) ಹಾಲೂ, ನೆಯ್ಯೇ–ಅದರ ಸಾರಾಂಶವಾದ ತುಪ್ಪವೂ, ನೆಯ್ಯಿನ್ ಇನ್‌ಶುವೈಯೇ–ತುಪ್ಪದ ಭೋಗ್ಯವಾದ ರಸವೂ, ಕಡಲಿನುಳ್ ಅಮುದಮೇ – ಸಮುದ್ರದಲ್ಲಿ ಹುಟ್ಟಿದ ಅಮೃತವೂ, ಅಮುದಿಲ್ ಪಿಱನ್ದ – ಆ ಅಮೃತದಲ್ಲಿ ಉತ್ಪನ್ನವಾದ, ಇನ್‌ಶುವೈಯೇ – ಲೋಕೋತ್ತರವಾದ ರಸವೂ, ಶುವೈಯದು–ಆ ರಸದಿಂದ ಹುಟ್ಟಿದ, ಪಯನೇ–ಪ್ರಯೋಜನವಾದ ಸುಖವೂ ನೀನೇ ಆಗಿ (ಮತ್ತು) ಪಿನ್ನೈ–ನಪ್ಪಿನ್ನೈಯೆಂಬ ನೀಳಾದೇವಿಯ, ತೋಳ್‌ಮಣನ್ದ – ಬಾಹುಸಂಶ್ಲೇಷವಂ (ಆಲಿಂಗನವಂ) ಪಡೆದ, ಪೇರಾಯಾ-ಮಹಾಪ್ರಭಾವವುಳ್ಳ ಗೋಪಾಲಕೃಷ್ಣನೇ! ವಿನೈಯೇನ್–ಪಾಪಿಯಾದ ನಾನೂ, ಇಱನ್ದದುಮ್ ಎದಿರ್‌ನ್ದದುಮ್ ನಿಕೞ್ವದು – ಭೂತ ಭವಿಷ್ಯದ್ವರ್ತಮಾನಕಾಲೋಪಲಕ್ಷಿತ ಸಕಲ ಪದಾರ್ಥಗಳೂ, ನೀಯೇ–ನೀನೇ (ನಿನಗೇ ವಶ್ಯವಾದುವು). ಇನ್ನೇ ಆನಾಲ್ – ಹೀಗಾದರೆ, ಅದು – ದೂರವರ್ತಿಯಾಗಿಯೂ, ಇದು-ಸಮೀಪವರ್ತಿಯಾಗಿಯೂ, ಉದು–ಮಧ್ಯವರ್ತಿಯಾಗಿಯೂ ಇರುವ ಸಕಲ ಪದಾರ್ಥಗಳೂ, ಶಿಱನ್ದನಿನ್ ತನ್ಮೈ-ವಿಲಕ್ಷಣವಾದ ನಿನ್ನ ಸ್ವಭಾವಗಳು, ಎನ್ಱು–ಎಂದು, ಅಱಿವು ಒನ್ಱುಮ್-ಈ ಪರಿಜ್ಞಾನವೊಂದನ್ನೂ, ಶಙ್ಕಿಪ್ಪನ್–ನಾನು ಸಂದೇಹಪಡುವೆನು.

( ಸ-ಗಾ-ರ ॥ )—

ಕ್ಷೀರಂ ಚಾಜ್ಯಂ ತದೀಯಂ ರಸಮಪಿ ಜಲಧೌ ಲಬ್ಧಮೇವಾಮೃತಂ ತ್ವಂ
ತಸ್ಯಾಪಿ ಪ್ರಾಪ್ತಸಾರಂ ಮಧುರಮಪಿ ಫಲಂ ತಸ್ಯ ಸರ್ವಂ ತ್ವಮೇವ |
ನೀಲಾಸಂಶ್ಲೇಷಭೋಗೀ ಸುಮಹಿತವಿಭವೋ ಗೋಪಸಿಂಹೋಽಸ್ಯತೀತಂ
ಭವ್ಯಂ ಯದ್ವರ್ತಮಾನಂ ತದಿದಮದ ಇತಿ ತ್ವಂ ಹಿ ಸರ್ವಂ ಚ ತತ್ತ್ವಮ್॥

ತಾ॥ ಆಗತಾನೇ ಕರೆದಹಾಲೂ, ಅದರ ರಸವಾದ ತುಪ್ಪವೂ, ಅದರ ಭೋಗ್ಯತೆಯೂ, ಅಮೃತವೂ, ಅದರ ರಸವೂ, ಅದರ ಫಲವೂ ನೀನೇ ಆಗಿರುತ್ತೀಯೆ. ಮತ್ತೂ ನೀಳಾದೇವಿಯ ಬಾಹುಸಂಶ್ಲೇಷವಂ ಪಡೆದ ಮಹಾಮಹಿಮೆಯುಳ್ಳ ಶ್ರೀಕೃಷ್ಣನೇ! ಭೂತಭವಿಷ್ಯದ್ವರ್ತಮಾನವಾದ ಸಕಲ ಪದಾರ್ಥಗಳೂ, ದೂರವರ್ತಿ-ಸಮೀಪವರ್ತಿ-ಮಧ್ಯವರ್ತಿ-ಸಕಲಪದಾರ್ಥಗಳೂ ನೀನೇ (ನಿನಗೇ ವಶ್ಯವಾಗಿವೆ)—ಎಂದು ಹೀಗೆ ತಿಳಿದು ಇದ್ದಾಗ್ಯೂ ಪಾಪಿಯಾದ ನಾನು ಸಂಶಯಪಡುತ್ತಿದೇನೆ.

(೮) ಮಣನ್ದ ಪೇರಾಯಾ ಮಾಯತ್ತಾಲ್ ಮುೞುದುಮ್
ವಲ್ವಿನೈಯೇನ್ನೈ ಯಿೞರ್ಕಿನ್ತ
ಕಣಙ್ಗಳೈಯುಡೈಯಾಯಶುರರ್ ವನ್ಗೈಯರ್
ಕೂಱ್ಱಮೇ ಕೊಡಿಯಪುಳ್ಳುಯರ್ತ್ತಾಯ್,
ಪಣಙ್ಗಳಾಯಿರಮುಮುಡೈಯ ಪೈನ್ನಾಕಪ್ಪಳ್ಳಿಯಾಯ್
ಪಾಱ್ಕಡಲ್ಶೇರ್ಪ್ಪಾ,
ವಣಙ್ಗುಮಾಱಱಿಯೇನ್ ಮನಮುಮ್ ವಾಶಕಮುಮ್
ಶೆಯಲ್ಕೈಯುಮ್ ಯಾನುನೀ ತಾನೇ.

ಪ್ರ॥ ಮಾಯತ್ತಾಲ್ - ಆಶ್ಚರ್ಯಚೇಷ್ಟಿತಗಳಿಂದ, ಮುೞುದುಮ್-ಸಮಗ್ರವಾಗಿ ಸಕಲ ಪದಾರ್ಥಗಳನ್ನೂ, ಮಣನ್ದ - ತನ್ನ ಸಮ್ಬನ್ಧದಿಂದ ಸನ್ತೋಷಪಡಿಸುವ, ಪೇರಾಯಾ - ಮಹಾಮಹಿಮೆಯುಳ್ಳ ಕೃಷ್ಣನೇ! ವಲ್ವಿನೈಯೇನ್ನೈ-ಮಹಾಪಾಪಿಯಾದ ನನ್ನನ್ನು, ಈರ್ಕಿನ್ತ ಸದಾ ಕ್ಲೇಶಪಡಿಸುವ, ಕಣಙ್ಗಳೈ-ಕಲ್ಯಾಣಗುಣಗಳನ್ನು, ಉಡೈಯೈಯಾಯ್ - ಉಳ್ಳವನಾಗಿರುತ್ತೀಯೆ, ವನ್ಗೈಯರ್ ಅಶುರರ್ - ಪ್ರಬಲವಿರೋಧಿಗಳಾದ ಅಸುರರಿಗೆ, ಕೂಱ್ಱಮೇ-ಮೃತ್ಯುವಾಗಿರುವವನೇ! ಕೊಡಿಯ-ಕ್ರೂರವಾದ, ಪುಳ್ ಉಯರ್ತ್ತಾಯ್ - ಗರುಡ

ನನ್ನೇ ಧ್ವಜವಾಗಿ ಉಳ್ಳವನೇ!, ಪಣಙ್ಗಳಾಯಿರಮುಮ್ ಉಡೈಯ–ಫಣಾಸಹಸ್ರವುಳ್ಳ, ಪೈನ್ನಾಕ–ವಿಸ್ತೀರ್ಣವಾದ ಶೇಷನನ್ನೇ, ಪಳ್ಳಿಯಾಯ್ – ಶಯನವಾಗಿ ಉಳ್ಳವನೇ!, ಪಾಱ್ಕಡಲ್–ಕ್ಷೀರಾಬ್ಧಿಯಲ್ಲಿ, ಶೇರ್‌ಪ್ಪಾ–ಸೇರಿ ಶಯನಮಾಡಿರುವವನೇ!, ಮನಮುಮ್ ವಾಚಕಮುಮ್ ಶೆಯ್‌ಕೈಯುಮ್ – ಮನೋವಾಕ್ಕಾಯಗಳೂ, ಯಾನುಮ್–ನಾನೂ, ನೀತಾನೇ–ನೀನೇ (ನಿನಗೇ ವಶ್ಯವಾಗಿರುತ್ತೇವೆ). (ಆದುದರಿಂದ) ವಣಙ್ಗುಮ್ ಆಱು ಅಱಿಯೇನ್ – ನಮಸ್ಕರಿಸುವ ಪ್ರಕಾರವನ್ನೇ ನಾನು ತಿಳಿಯೆನು.

( ಸ–ಗಾ–ರ || )—

ಮಾಯಾತಸ್ಸರ್ವವಸ್ತೂನ್ಯಪಿ ವಿಕಟಿ ಮಹಾನ್ ಗೋಪಬಾಲಸ್ತ್ವಮೇವ!
ತ್ವನ್ಮಾಹಾತ್ಮ್ಯಂ ಹಿ ರಕ್ಷೋಗಣಶಮನ! ಸದಾ ಪಾಪಿನಂ ಮಾಂ ಶುದೇಚ್ಛ!
ಕ್ಷೀರಾಮ್ಭೋಧಿಂ ಶ್ರಿತಸ್ತ್ವಂ ಗರುಡಗಮನ! ಭೋಶ್ಶೇಷಶಾಯಿನ್!
ಮನೋವಾ–
ಕ್ಕಾಯಾಸ್ಸರ್ವೇಽಪ್ಯಹಂ ಚ ತ್ವಮಸಿ ನನು! ತತೋ ನ ಪ್ರಣನ್ತುಂ ಚ ವೇದ್ಮಿ॥

ತಾ॥ ಆಶ್ಚರ್ಯಚೇಷ್ಟಿತಗಳಿಂದ ಸಕಲ ಪದಾರ್ಥಗಳನ್ನೂ ಸನ್ತೋಷಪಡಿಸುವ ಮಹಾಮಹಿಮೆಯುಳ್ಳ ಕೃಷ್ಣನೇ! ಮಹಾಪಾಪಿಯಾದ ನನ್ನನ್ನು ಕ್ಲೇಶಪಡಿಸುವ ಕಲ್ಯಾಣಗುಣಗಳುಳ್ಳವನೇ! ಅಸುರಧ್ವಂಸಕನೇ! ಗರುಡಧ್ವಜನೇ! ಫಣಾಸಹಸ್ರವುಳ್ಳ ಆದಿಶೇಷನಲ್ಲಿ ಶಯನಮಾಡಿರುವವನೇ! ಕ್ಷೀರಾಬ್ಧಿಶಾಯಿಯೇ! ನನ್ನ ಮನೋವಾಕ್ಕಾಯಗಳೂ ನಾನೂ ನೀನೇ ಆಗಿರುವಲ್ಲಿ ನಾನು ಹೇಗೆ ನಿನಗೆ ನಮಸ್ಕರಿಸುವೆನು ?

(೯) ಯಾನುಮ್ ನೀ ತಾನೇ ಯಾವದೋ ಮೆಯ್ಯೇ
ಯರುನರಕವೈಯುಮ್ ನೀಯಾನಾಲ್,
ವಾನುಯರಿನ್ಬಮೆಯ್‌ದಿಲೆನ್ ಮಱ್ಱೈನರಕಮೇ
ಯೆಯ್‌ದಿಲೆನೆನಿಲುಮ್,
ಯಾನುನೀತಾನಾಯ್ ತ್ತೆಳಿತೋಱುಮ್ ನಸ್ಮಮೆೞ್ವನ್
ನರಕಮ್ ನಾನಡೈದಲ್,
ವಾನುಯರಿನ್ಬಮ್ ಮನ್ನಿ ವೀಱ್ಱಿರುನ್ದಾಯರುಳು
ನಿನ್ತಾಳ್‌ಕಳೈ ಯೆನಕ್ಕೇ.

ಪ್ರ॥ ಯಾನುಮ್-ನಾನೂ, ನೀತಾನೇ-ನೀನೇ ಆಗಿರುವೆನು ; ಆವದೋ-ಈ ಪ್ರಕಾರವಾದ ಅರ್ಥವೂ, ಮೆಯ್ಯೇ-ಸತ್ಯವೇ, ಅರುನರಕು ಅವೈಯುಮ್-ದಾಟುವುದಕ್ಕೆ ಅಶಕ್ಯವಾದ ಸಂಸಾರ ನರಕಗಳೂ, ನೀ ಆನಾಲ್-ನಿನಗೇ ವಶ್ಯಗಳಾದರೆ, ವಾನ್-ಪರಮಪದದಲ್ಲಿ, ಉಯರ್ ಇನ್ಬಮ್-ಮಹಾನನ್ದವನ್ನು, ಎಯ್‌ದಿಲ್ ಎನ್-ಹೊಂದಿದರೆ ಏನು ? ಮಱ್ಱೈ-ಅದಕ್ಕೆ ಪ್ರತಿಭಟವಾದ, ನರಕಮೇ-ಸಂಸಾರ ನರಕವನ್ನೇ, ಎಯ್‌ದಿಲ್ ಎನ್ - ಹೊಂದಿದರೆ ಏನು ?, ಎನಿಲುಮ್ - ಎಂದು (ಲೋಕದಲ್ಲಿ) ವಾದಿಸಿದರೂ, ಯಾನುಮ್ - ನಾನೂ, ನೀತಾನಾಯ್-ನೀನೇ ಆಗಿರುತ್ತೀಯೆ ಎಂದು, ತೆಳಿತೊಱುಮ್-ತಿಳಿದು ಅನುಸನ್ಧಾನಮಾಡುವಾಗಲೆಲ್ಲಾ, ನರಕಮ್ - ಸಂಸಾರನರಕವನ್ನು, ನಾನ್ ಅಡೈದಲ್ - ನಾನು ಹೊಂದುವುದನ್ನು ಕುರಿತು, ನನುಮ್ ಅಞ್ಜುವನ್-ಅತ್ಯನ್ತ ಭೀತನಾಗಿರುತ್ತೇನೆ. ವಾನ್-ಪರಮಪದದಲ್ಲಿ, ಉಯರ್ ಇನ್ಬಮ್ - ಪರಮಾನನ್ದವನ್ನು, ಮನ್ನಿ-ಪಡೆದು, ವೀಱ್ಱಿರುನ್ದಾಯ್-ನಿರನ್ತರವಾಗಿ ಬಿಜಯಮಾಡಿರುವವನೇ !, ನಿನ್ ತಾಳ್‌ಕಳೈ -(ಆ ಪರಮಪದವಾಸಿಗಳಿಗೆ ಲಭ್ಯವಾದ) ನಿನ್ನ ಚರಣಗಳನ್ನು, ಎನಕ್ಕೇ-ನನಗೇ, ಅರುಳು ಕೃಪೆಮಾಡು.

( ಸ-ಗಾ-ರ ॥ )—

ಯಾಥಾತ್ಮ್ಯತ್ರದಸ್ತ್ವಹಂ ಚ ತ್ವಮಿಹ ಭವಮಹಾನಾರಕಾದಿ ತ್ವಮೇವೇ-
ತ್ಯೇನಂ ಚೇತ್ಕಿಂ ಫಲಂ ಸ್ಯಾತ್ಪರಮಪದಗತೇಃ? ಕಿಂ ಭಯಂ ನಾರಕಾದ್ವಾ?।
ಏವಂ ಚಿನ್ತಾಕುಲೋಽಹಂ ತ್ವಯಿ ಕಿಲ ಯದಾ ತತ್ತ್ವವಿತ್ ಸ್ಯಾಂ ತದಾಽಪಿ
ಸ್ಯಾದ್ಭೀತಿರ್ನಾರಕಾನ್ಮೇ! ಪರಮಪದಮಹಾನನ್ದ! ಮೇ ದೇಹಿ ತೇಽಂಘ್ರೀ॥

ತಾ॥ ನಾನೂ ನೀನೇ (ನಿನಗೇ ವಶ್ಯನು)—ಎಂಬೀ ಅರ್ಥವೂ ಸತ್ಯವೇ. ದುಸ್ತರವಾದ ಸಂಸಾರ ನರಕಾದಿಗಳೂ ನಿನಗೇ ವಶ್ಯವಾಗಿದ್ದರೆ, ಪರಮಪದದಲ್ಲಿ ಮಹಾನನ್ದವನ್ನು ಹೊಂದಿದರೆ ಏನು? ನರಕವನ್ನು ಹೊಂದಿದರೆ ಏನು ?—ಎಂದು ಲೋಕದಲ್ಲಿ ಜನರು ವಾದಿಸಿದರೂ, ಜೀವಾತ್ಮನಾದ ನಾನು ಪರಮಾತ್ಮನಾದ ನಿನಗೇ ಅಧೀನನೆಂದು ತಿಳಿದು ಅನುಸನ್ಧಾನಮಾಡುವಾಗಲೆಲ್ಲಾ ಸಂಸಾರನರಕವನ್ನು ಕುರಿತು ಭೀತನಾಗಿದೇನೆ. ಪರಮಪದದಲ್ಲಿ ಪರಮಾನನ್ದವನ್ನು ಹೊಂದಿ ನಿರನ್ತರವಾಗಿ ಬಿಜಯಮಾಡಿರುವವನೇ! ನಿತ್ಯಮುಕ್ತ ಸಂಸೇವ್ಯವಾದ ನಿನ್ನ ಚರಣಗಳನ್ನು ನನಗೇ ಕೃಪೆಮಾಡು.

(೧೦) ತಾಳ್‌ಕಳ್ಳೈ ಯೆನಕ್ಕೇ ತಲ್ಲೈತ್ತಲ್ಲೈ ಚ್ಚಿಱಪ್ಪತ್ತನ್ದ
ಪೇರುದವಿ ಕ್ಕೈಮ್‌ಮಾಱಾ,
ತೋಳ್‌ಕಳ್ಳೈ ಯಾರತ್ತಳುವಿ ಯೆನ್ನುಯಿರ್ರೈ
ಯಱವಿಲೈಶೆಯ್‌ದ ನೞ್‌ಶೋದಿ.
ತೋಳ್‌ಕಳಾಯಿರತ್ತಾಯ್ ಮುಡಿಕಳಾಯಿರತ್ತಾಯ್
ತುಣೈಮಲರ್‌ಕ್ಕಣ್‌ಕಳಾಯಿರತ್ತಾಯ್
ತಾಳ್‌ಕಳಾಯಿರತ್ತಾಯ್ ಪೇರ್‌ಕಳಾಯಿರತ್ತಾಯ್
ತಮಿಯನೇಱ್ ಪೆರಿಯವಪ್ಪನೇ.

ಪ್ರ॥ ತಾಳ್ ಕಳ್ಳೈ-ಪಾದಗಳನ್ನು, ಎನಕ್ಕೇ ನನಗೇ, ತಲ್ಲೈತ್ತಲ್ಲೈ-ಮೇಲು ಮೇಲೆ, ಶಿಱಪ್ಪ - ಪ್ರವರ್ಧಮಾನವಾಗುವಂತೆ, ತನ್ದ-ಅನುಗ್ರಹಿಸಿದ, ಪೇರ್ ಉದವಿ - ಮಹೋಪಕಾರಕ್ಕೆ, ಕೈಮ್‌ಮಾಱು ಆ - ಪ್ರತ್ಯುಪಕಾರವಾಗಿ, ಎನ್ ಉಯಿರ್ರೈ-ನನ್ನ ಆತ್ಮವಸ್ತುವನ್ನು, ತೋಳ್‌ಕಳ್ಳೈ ಆರತ್ತಳುವಿ-ಭುಜಗಳು ಪೂರ್ಣ ವಾಗುವಂತೆ ಆಲಿಂಗನಮಾಡಿ, ಅಱವಿಲೈ-ಧರ್ಮನಿರ್ಣಯರೂಪವಾದ ಕ್ರಿಯವನ್ನು, ಶೆಯ್‌ದನೆ - ಮಾಡಿಬಿಟ್ಟೆನು. ಶೋದಿ - (ಈ ನನ್ನ ಆತ್ಮಸಮರ್ಪಣದಿಂದ ಉಂಟಾದ) ತೇಜೋನಿಧಿಯೇ!, ತೋಳ್‌ಕಳ್ ಆಯಿರತ್ತಾಯ್-ಸಹಸ್ರ ಬಾಹು ಗಳುಳ್ಳವನೇ!, ಮುಡಿಕಳ್ ಆಯಿರತ್ತಾಯ್-ಸಹಸ್ರಶೀರ್ಷನೇ!, ತುಣೈಮಲರ್- ಪರಸ್ಪರ ಸಮಾನವಾದ ತಾವರೆಪುಷ್ಪಗಳಂತೆ ಇರುವ, ಕಣ್‌ಕಳ್ ಆಯಿರತ್ತಾಯ್- ಸಹಸ್ರನೇತ್ರಗಳುಳ್ಳವನೇ!, ತಾಳ್‌ಕಳ್ ಆಯಿರತ್ತಾಯ್ - ಸಹಸ್ರಪಾದಗಳುಳ್ಳ ವನೇ!, ಪೇರ್‌ಕಳ್ ಆಯಿರತ್ತಾಯ್-ಸಹಸ್ರನಾಮಧೇಯಗಳುಳ್ಳವನೇ!, ತಮಿ ಯನೇಱ್ - ಏಕಾಕಿಯಾದ (ಅನಾಥನಾದ) ನನಗೆ, ಪೆರಿಯ ಅಪ್ಪನೇ-ಮಹೋಪ ಕಾರಕನಾದ ಸ್ವಾಮಿಯೇ!

( ಸ-ಗಾ-ರ ॥ )—

ತೇಽಂಘ್ರೀ ಮೇ ದತ್ತವಾಂಸ್ತ್ವಂ! ತತ ಇಹ ಕೃತವಿನ್ಮೇ ಕಿಲಾತ್ಮಾರ್ಪಣಂ ತೇ
ಸಾಕ್ಷಾತ್ಸತ್ಯಂ ತನೋಮಿ! ಸ್ವಯಮಹಹ! ಮಹಾ
ಜ್ಯೋತಿಷಾಮಾಕರಸ್ತ್ವಮ್ ।
ತ್ವಂ ಮೇ ಸಾಹಸ್ರಬಾಹುಃ ಪ್ರಭುರಸಿ ಹಿ ಸಹಸ್ರಾಕ್ಷಿಪಾದಾಬ್ಜಮೌಳಿ-
ಸ್ತ್ವಂ ಸಾಹಸ್ರನಾಮಾ ವಿಲಸಸಿ ಸತತಂ! ಮೇ ಗತಿಸ್ತ್ವಂ ಶರಣ್ಯಃ ॥

ತಾ|| ನಿನ್ನ ಪಾದಗಳನ್ನು ನನಗೆ ಅನುಗ್ರಹಿಸಿದ ಮಹೋಪಕಾರಕ್ಕೆ ನಾನು ನನ್ನ ಆತ್ಮವಸ್ತುವನ್ನು ನಿನಗೆ ಸಮರ್ಪಿಸಿ ಈ ಪ್ರಕಾರ ಕ್ರಯವಿಕ್ರಯವನ್ನು ಮಾಡಿಬಿಟ್ಟೆನು. ಎಲೈ ತೇಜೋನಿಧಿಯೇ! ಸಹಸ್ರಬಾಹುವಾಗಿಯೂ, ಸಹಸ್ರ ಶೀರ್ಷನಾಗಿಯೂ, ಸಹಸ್ರನೇತ್ರನಾಗಿಯೂ, ಸಹಸ್ರಪಾದನಾಗಿಯೂ, ಸಹಸ್ರನಾಮ ವಾಚ್ಯನಾಗಿಯೂ ಇರುವ ಸ್ವಾಮಿಯೇ! ಏಕಾಕಿಯಾಗಿ ಅನಾಥನಾದ ನನಗೆ ನೀನೇ ಮಹೋಪಕಾರಕನಾದ ಶರಣ್ಯನು.

(೧೧) ಪೆರಿಯವಪ್ಪನೈ ಪ್ಪಿರಮನಪ್ಪನೈ ಯುರುತ್ತಿರನಪ್ಪನೈ.
ಮುನಿವರ್
ಕ್ಕುರಿಯವಪ್ಪನೈ ಯಮರರಪ್ಪನೈ ಯುಲಕುಕ್ಕೋರ್
ತನಿಯಪ್ಪನ್ತನ್ನೈ,
ಪೆರಿಯ ವಣ್‌ಕುರುಕೂರ್ ವಣ್‌ಶಡಕೋಪನ್ ಪೇಣಿನ
ವಾಯಿರತ್ತುಳ್ಳುಮ್,
ಉರಿಯ ಶೊನ್ಮಾಲೈಯಿವೈಯುಮ್
ಪತ್ತಿವೈಯಾಲುಯ್ಯಲಾಮ್ ತೊಣ್ಡೀರ್ ನಙ್ಗಳ್ಕ್ಕೇ.

ಪ್ರ|| ಪೆರಿಯ ಅಪ್ಪನೈ-ಸರ್ವಾಧಿಕನಾದ ಸ್ವಾಮಿಯನ್ನು, ಪಿರಮ್ಮ ಅಪ್ಪನೈ-ಚತುರ್ಮುಖಬ್ರಹ್ಮನಿಗೆ ತಂದೆಯಾದವನನ್ನು, ಉರುತ್ತಿರನಪ್ಪನೈ – ರುದ್ರನಿಗೂ ಕ್ರಮೇಣ (ಬ್ರಹ್ಮನ ಮೂಲಕ) ಜನಕನಾದವನನ್ನು, ಮುನಿವರ್‌ಕ್ಕ-ಸನಕಾದಿ ಮುನಿಗಳಿಗೆ, ಉರಿಯ ಅಪ್ಪನೈ-ಅನುಭಾವ್ಯನಾದ ಸ್ವಾಮಿಯನ್ನು, ಅಮರರ್ ಅಪ್ಪನೈ–ದೇವತೆಗಳಿಗೆ ಜನಕನಾದವನನ್ನು, ಉಲಕುಕ್ಕು–ಲೋಕಗಳಿಗೆ, ಓರ್–ಅದ್ವಿತೀಯನಾದ, ತನಿ ಅಪ್ಪನ್ ತನ್ನೈ–ಏಕವಸ್ತುವಾದ ಮೂಲಕಾರಣಭೂತನಾದ ಸ್ವಾಮಿಯನ್ನು, ಪೆರಿಯವಣ್ ಕುರುಕೂರ್ – ಮಹೋದಾರ ಸಮೃದ್ಧಿಶಿಷ್ಟವಾದ ಕುರುಕಾಪುರಿಯ, ವಣ್‌ಶಡಕೋಪನ್–ಉದಾರಶೀಲರಾದ ಶ್ರೀಶಠಾರಿಮುನಿವರ್ಯರು, ಪೇಣಿನ–ಆದರದಿಂದ ಸ್ತುತಿಸಲು ರಚಿಸಿದ, ಆಯಿರತ್ತುಳ್ಳುಮ್-ಸಹಸ್ರಪದ್ಯಮಾಲೆಯೊಳು, ಉರಿಯ-ಶ್ಲಾಘ್ಯವಾದ, ಶೊಲ್‌ಮಾಲೈ – ದಿವ್ಯಸೂಕ್ತಿಮಾಲೆಯಾದುದು, ಇವೈಪತ್ತುಮ್–ಈ ದಶಕರೂಪವಾದುದು. ಇವತ್ತಾಲ್-ಈ ಹತ್ತು ಪದ್ಯಗಳಿಂದ, ತೊಣ್ಡೀರ್-ಭಕ್ತರೇ!, ನಙ್ಗಳ್ಕ್ಕು ಉಯ್ಯಲಾಮೇ-ನಮಗೆ ಉಜ್ಜೀವನವು ಉಂಟಾಗ ಬಹುದಷ್ಟೆ!

( ಸ-ಗಾ-ರ || )—

ಸರ್ವಸ್ಮಾತ್ಪರಮೇವ ಧಾತೃಪಿತರಂ ರುದ್ರಸ್ಯ ತಾತಂ ಪಿತುಃ
ಸರ್ವೇಷಾಮಪಿ ಮೌನಿನಾಂ ಚ ಪಿತರಂ ಧ್ಯೇಯಂ ಶಠಾರಿರ್ಮುನಿಃ |
ದೇವಾನಾಮಪಿ ದೇವಮೇವ ಕುರುಕಾನಾಥೋ ಜಗನ್ನಾಯಕಂ
ಸ್ತೋತುಂ ಚಾಹ ಸಹಸ್ರಮತ್ರ ದಶಕಾದುಜ್ಜೀವನಂ ಸ್ಯಾಚ್ಚ ನಃ ||

ತಾ|| ಸರ್ವಾಧಿಕನಾಗಿಯೂ ಬ್ರಹ್ಮರುದ್ರಾದಿಗಳಿಗೂ ಸನಕಾದಿ ಮುನಿಗಳಿಗೂ ದೇವತೆಗಳಿಗೂ ಜನಕನಾಗಿಯೂ, ಸಕಲಲೋಕ ಮೂಲಕಾರಣಭೂತನಾಗಿಯೂ ಇರುವ ಮಹಾಸ್ವಾಮಿಯನ್ನು ಉದಾರ ಸಪ್ಪದ್ವಿಶಿಷ್ಟವಾದ ಕುರುಕಾಪುರಿಯ ಶ್ರೀ ಶಠಾರಿಮುನಿಯು ಆದರದಿಂದ ಸ್ತುತಿಸಲು ರಚಿಸಿದ ಸಹಸ್ರಪದ್ಯಮಾಲೆಯೊಳು ಈ ದಶಕವು ಶ್ಲಾಘ್ಯವಾದ ದಿವ್ಯಸೂಕ್ತಿಮಾಲಾರೂಪವಾದುದು. ಈ ಹತ್ತು ಪದ್ಯಗಳಿಂದ ಭಕ್ತರಾದ ನಮಗೆಲ್ಲಾ ಉಜ್ಜೀವನವುಂಟಾಗುವುದಷ್ಟೆ !

( ದ್ರ-ಉ-ಸಂ || )—

ಆದ್ಯೇಽಷ್ಟಮಸ್ಯ ಶತಕಸ್ಯ ಯಥೇಷ್ಟಸಿದ್ಧಿ-
ಮಪ್ರಾಪ್ಯ ಖಿನ್ನಮತಿರಾಶ್ರಿತಪಾರತನ್ತ್ರ್ಯಮ್ |
ಸರ್ವೇಶ್ವರತ್ವಮಪಿ ಶಙ್ಕಿತವಾನ್ ಶಠಾರಿ -
ರೀಶಸ್ಯ ತೇನ ಪುನರೇವ ವಿಬೋಧಿತಶ್ಚ ||

( ದ್ರ-ಉ-ತಾ-ರ || )—

ಶ್ರಾವ್ಯೈರ್ಭ್ಯಃ ಪತ್ನ್ಯಾದಿಮತ್ತ್ವಾದ್ರಘುಯದುಕುಲಯೋರುದ್ಭವಾತ್ ಸ್ವಾಶ್ರಿತೇಚ್ಛಾ-
ಧೀನೇಹಾವಿಗ್ರಹತ್ವಾತ್ಸಕಲಚಿದಚಿತಾಮನ್ತರಾತ್ಮತ್ವಭೂಮ್ನಾ |
ಸ್ವಾಮಿತ್ವಾತ್ ಸ್ವಾಶ್ರಿತಾವೇಧ್ಯಖಿಲಗುಣತಯಾ ಜ್ಞಾನಿನಾಮಪ್ಯದುಃಖ-
ಸ್ಥಾನೇಚ್ಛಾಪಾದನಾದ್ಯೈರ್ಹರಿರಕಥಿ ಪರಂ ದರ್ಶನೇಚ್ಛೋಸ್ಸುದೃಶ್ಯಃ ||

(ಈ ಪ್ರಥಮದಶಕದ ಸಾರಾಂಶ—)

ಈ ಮೊದಲನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಆಶ್ರಿತ ಪಾರತನ್ತ್ರ್ಯಾದಿ ಗುಣಗಳಲ್ಲಿ ವಿಶ್ವಾಸವಿಲ್ಲದೆ ಮೊರೆಯಿಡುವಾಗ ಭಗವನ್ತನು ತನ್ನ ಅಪಾರವಾದ ಮಹಿಮೆಯನ್ನು ಅವರಿಗೆ ತೋರಿಸಲು ಸನ್ತುಷ್ಟರಾಗಿ, ಸಮುದ್ರ ಮಥನವಂಮಾಡಿದ ಸ್ವಾಮಿಯನ್ನೂ, ವರಾಹಾವತಾರವನ್ನೂ, ನರಸಿಂಹಾವತಾರ

ವನ್ನೂ, ಕೃಷ್ಣಾವತಾರವನ್ನೂ, ರಾಮಾವತಾರವನ್ನೂ, ಸರ್ವಲೋಕಾನ್ತರ್ಯಾಮಿಯನ್ನೂ, ಸರ್ವವ್ಯಾಪಿ ಸ್ವರೂಪವನ್ನೂ, ಕ್ಷೀರಾಬ್ಧಿಶಾಯಿಯನ್ನೂ, ಪರಮಪದನಾಥನನ್ನೂ, ಸಹಸ್ರಶೀರ್ಷತ್ವಾದಿ ವಿಶಿಷ್ಟವಾದ ರೂಪವನ್ನೂ ಕ್ರಮೇಣ ಸ್ತುತಿಸಿ, ನಾನು ನಿನ್ನನ್ನು ಹೇಗೆ ಆಶ್ರಯಿಸುವೆನೆಂದು ಆಕ್ರನ್ದನಮಾಡಿ, ಈ ದಶಕಪಠನದಿಂದ ಎಲ್ಲರಿಗೂ ಉಜ್ಜೀವನವು ಉಂಟಾಗುವುದೆಂದು ಫಲವನ್ನೂ ಸೂಚಿಸಿ ಇರುತ್ತಾರೆ.

---

## ಶ್ರೀಃ

## ಅಷ್ಟಮಶತಕದಲ್ಲಿ—ದ್ವಿತೀಯದಶಕ.

### (ನಙ್ಗಳ್ವರಿವಳೈ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂಪಡೆದು ಸಖೀಜನರನ್ನೂ ಮಾತೃವರ್ಗವನ್ನೂ ಕುರಿತು ಈ ನಾಯಕಿಯು ತನ್ನ ಸಂಸಾರ ನೈರಾಶ್ಯವನ್ನು ಹೇಳುವಂತೆ—ವರ್ಣಿಸಿ ಇರುತ್ತಾರೆ.)

---

(೧) ನಙ್ಗಳ್ವರಿವಳೈ ಆಯಙ್ಗಳೋ! ನಮ್ಮುಡೈಯೇದಿಲರ್
ಮುನ್ಬುನಾಣಿ,
ನುಙ್ಗಟ್ಕು ಯಾನೊನ್ಱುರೈಕ್ಕುಮಾಱ್ಱಮ್
ನೋಕ್ಕುಕಿನ್ಱೇನೆಙ್ಗುಮ್ ಕಾಣಮಾಟ್ಟೇನ್,
ಶಙ್ಗಮ್ ಶರಿನ್ದನ ಶಾಯಿೞನ್ದೇನ್ ತಡಮುಲೈ
ಪೊನ್ನಿಱಮಾಯ್ ತ್ತಳರ್ನ್ದೇನ್,
ವೆಙ್ಗಣ್ಪಱವೈಯಿನ್ ಪಾಕನೆಙ್ಗೋನ್ ವೇಙ್ಗಡವಾಣನೈ
ವೇಣ್ಡಿಚ್ಚೆನ್ಱೇ.

ಪ್ರ॥ ವರಿ - ರೇಖೆಗಳುಳ್ಳ, ವಳೈ - ಕೈಬಳೆಗಳುಳ್ಳ, ನಙ್ಗಳ್ - ನಮ್ಮ ಆಯಙ್ಗಳೋ-ಸಖೀಜನರೇ!, ನಮ್ಮುಡೈ-ನಮ್ಮ, ಏದಿಲರ್ಮುನ್ಬು - ಶತ್ರುಪ್ರಾಯರಾದ ಜನನೀ ಪ್ರಭೃತಿಗಳಮುಂದೆ, ನಾಣಿ-ಲಜ್ಜೆಯೊಡನೆ, ನುಙ್ಗಟ್ಕು-ನಿಮಗೆ, ಯಾನ್-ನಾನು, ಉರೈಕ್ಕುಮ್-ಹೇಳತಕ್ಕ, ಮಾಱ್ಱಮ್ ಒನ್ಱು-ಮಾತು

ಒಂದನ್ನು, ನೋಕ್ಕುಕಿನ್ಱೇನ್ – ಹುಡುಕುತ್ತಿದೇನೆ. ಎಙ್ಗುಮ್–ಎಲ್ಲಿಯೂ, ಕಾಣ ಮಾಟ್ಟೇನ್–ಕಾಣಲಾರೆನು. ವೆಮ್ ಕಣ್ – ಕ್ರೂರದೃಷ್ಟಿಯುಳ್ಳ, ಪುಳ್ಳೈಯಿನ್ ಪಾಕನ್–ಗರುಡನಮೇಲೆ ಆರೂಢನಾದ, ಎಮ್ ಕೋನ್ – ನಮ್ಮಸ್ವಾಮಿಯಾದ, ವೇಙ್ಗಡವಾಣನೈ – ಶ್ರೀ ವೇಙ್ಕಟಾದ್ರೀಶ್ವರನನ್ನು, ವೇಣ್ಡಿಚ್ಚೆನ್ಱು – ಪ್ರಾರ್ಥಿಸಲು ಹೋಗಿ, ಶಙ್ಗಮ್ ಕರಿನ್ದನ–ನನ್ನ ಕೈಬಳೆಗಳು ಕಳಚಿ ಬಿದ್ದುಹೋದುವು. ಶಾಯ್ ಇೞನ್ದೇನ್–ನನ್ನ ಪ್ರಕಾಶವೂ ಹೋಯಿತು. ತಡಮ್ ಮುಲೈ–ಮಹಾಸ್ತನಗಳು, ಪೊನ್ನಿಱಮಾಯ್–ವಿವರ್ಣವಾಗಿ, ತಳರ್ನ್ದೇನ್–ಶೈಥಿಲ್ಯವನ್ನು ಹೊಂದಿದೆನು.

( ಸ–ಗಾ–ರ || )—

ಹೇ ಸಖ್ಯಃ! ಕರಕಙ್ಕಣೈಸ್ಸ್ವರುಚಿರೈರ್ಮುಕ್ತಾಃ ಪ್ರಿಯಾ ಮೇಽಧುನಾ
ಕಿಂ ಚಿದ್ವಕ್ತುಮಿಹೋತ್ಸುಕಾಽಸ್ಮಿ ಚ ರಹೋ ಯದ್ಗೋಪ್ಯತೇ ವೈರಿಣಾಮ್|
ದುಸ್ಸ್ವಾಧಸ್ಸಮಯೋಽಸ್ತಿ ಮೇ! ಶೃಣುತ! ಮೇ ನಾಥಂ ಹರಿಂ ವೇಙ್ಕಟಂ
ತಾರ್ಕ್ಷ್ಯಾರೂಢಮವಾಪ್ತುಮಸ್ಮಿ ಶಿಥಿಲಾ ವೈವರ್ಣ್ಯತಸ್ಸುಸ್ತನೀ||

ತಾ|| ಎಲೈ ಸಖೀಜನರೇ! ಶತ್ರುಪ್ರಾಯರಾದ ಜನನೀಪ್ರಭೃತಿಗಳಮುಂದೆ ಹೇಳಲು ಲಜ್ಜಿತೆಯಾಗಿ ನಿಮಗೆಮಾತ್ರ ರಹಸ್ಯವಾಗಿ ಒಂದು ಮಾತನ್ನು ಹೇಳಲು ಸಮಯವನ್ನು ಹುಡುಕುತ್ತಿದೇನೆ. ಅದಕ್ಕೆ ಸಮಯವು ಇದುವರೆಗೆ ಸಿಕ್ಕಲಿಲ್ಲ. (ಈಗ ಹೇಳುತ್ತೇನೆ ಕೇಳಿರಿ) ಗರುಡಾರೂಢನಾದ ನಮ್ಮ ಶ್ರೀ ವೇಙ್ಕಟೇಶ್ವರನನ್ನು ಆಶೆಪಟ್ಟು ಪ್ರಾರ್ಥಿಸಲು ಹೋದುದರಿಂದ ನನ್ನ ಕೈಬಳೆಗಳು ಕಳಚಿ ಬಿದ್ದು ಹೋದುವು. ನನ್ನ ದೇಹಕಾನ್ತಿಯೂ ಹೋಯಿತು. ನನ್ನ ಮಹಾಸ್ತನಗಳೂ ವಿವರ್ಣವಾದುವು. ಹೀಗೆ ನಾನು ಶಿಥಿಲೆಯಾಗಿದೇನೆ.

(೨) ವೇಣ್ಡಿಚ್ಚೆನ್ಱೊನ್ಱು ಪೆಱುಕಿಲ್ ಪಾರಿಲೆನ್ನುಡೈ ತೋೞಿಯರ್
ನುಙ್ಗಟ್ಕೇಲುಮೆ,
ಈಣ್ಡಿದುರೈಕ್ಕುಮ್ ಪಡಿಯೈ ಯನ್ನೋ
ಕಾಣ್ಕಿನ್ಱಿಲೇನಿಡರಾಟ್ಟಿಯೇನ್ ನಾನ್,
ಕಾಣ್ಡುಕ ತಾಮರೈಕ್ಕಣ್ಣನ್ ಕಳ್ವನ್ ವಿಣ್ಣವರ್ಕೋನ್
ನಙ್ಗಳ್ಕೋನೈ ಕ್ಕಣ್ಡಾಲ್,
ಈಣ್ಡಿಯ ಶಙ್ಗಮ್ ನಿತ್ತಾವುಮ್ ಕೊಳ್ವಾನೆತ್ತನ್ನೈ
ಕಾಲಮಿಳೈಕ್ಕಿನ್ಱೇನೇ.

ಪ್ರ|| ಶೆನ್ಱು–ಹೋಗಿ, ಒನ್ಱುವೇಣ್ಡಿ–ಒಂದು ವಸ್ತುವನ್ನು ಅಪೇಕ್ಷಿಸಿ, ಪೆಱುಕಿಲ್ ಪಾರಿಲ್–ಹೊಂದಬೇಕೆಂದು ಉದ್ದೇಶಿಸಿರುವವರೊಳಗೆ, ಎನ್ನುಡೈತೋೞಿಯರ್–

ನನ್ನ ಸಖೀಜನರಾದ, ನುಙ್ಗಳ್ಕ್ಕೇಲುಮ್-ನಿಮಗೇ ಆದರೂ, ಈಣ್ಡು-ಇಲ್ಲಿ, ಇದು-ಇದನ್ನು, ಉರೈಕ್ಕುಮ್ ಪಡಿಯ್ಯ-ಹೇಳುವ ಪ್ರಕಾರವನ್ನು, ಅನ್ದೋ-ಅಯ್ಯೋ! ಇಡರಾಟ್ಟಿಯೇನ್ ನಾನ್-ದುಃಖವುಳ್ಳ ನಾನು, ಕಾಣ್ಕಿನ್ಱಿಲೇನ್-ಕಾಣಲಾರೆನು. ಕಾಣ್ ತಕು-ನೋಡುವುದಕ್ಕೆ ಉಚಿತವಾದ, ತಾಮರೈಕ್ಕಣ್ಣನ್-ಕಮಲಗಳಂತೆ ನೇತ್ರಗಳುಳ್ಳ, ಕಳ್ವನ್-ವಞ್ಚಕನಾದ, ವಿಣ್ಣವರ್ಕೋನ್-ನಿತ್ಯಸೂರೀಶ್ವರನಾದ ನಙ್ಗಳ್ಕೋನೈ-ನಮ್ಮ ಸ್ವಾಮಿಯನ್ನು, ಕಣ್ಡಾಲ್-ನೋಡಿದರೆ, ಈಣ್ಡೈಯು-ಅವನಲ್ಲಿ ಹೋಗಿ ಸೇರಿಬಿಟ್ಟ, ಶಙ್ಗಮ್-(ನನ್ನ) ಕೈಬಳೆಗಳನ್ನೂ, ನಿಱೈವುಮ್-ಸ್ತ್ರೀತ್ವಾದಿ ಗುಣಪೂರ್ತಿಯನ್ನೂ, ಕೊಳ್ವಾನ್-ಹೊಂದಬೇಕೆಂದು, ಎತ್ತನೈಕಾಲಮ್-ಎಷ್ಟುಕಾಲದಿಂದ, ಇಳೈಕ್ಕಿನ್ಱೇನ್-ಶಿಥಿಲೆಯಾಗಿದೇನೆ!

( ಸ-ಗಾ-ರ || ) —

ಪ್ರಾಪ್ಸ್ಯೈವನಂ ಬತ! ಕಿಞ್ಚಿದಾಪ್ತಮಿಹ ವಃ ಸಖ್ಯಸ್ತ್ವಹೋ ಧ್ಯಾಸ್ತು ನಃ
ಕಿಞ್ಚಿದ್ವಕ್ತುಮಹಂ ನ ವೇದ್ಮಿ ಸದೃಶಂ ಹಾ! ಹನ್ತ! ಕದಾತ್ಮಾಪ್ಯಕಃ |
ಅತ್ಯನ್ತಂ ರಮಣೀಯರೂಪ ಇಹ ಮೇ ನಾಥಸ್ಸ್ವಯಂ ವಞ್ಚಕ-
ಸ್ಸೂರೀನ್ದ್ರಃ ಕಿಲ! ತದ್ವಶಂ ತು ವಲಯಂ ಸ್ತ್ರೀತ್ವಂ ಚ ಮೇ ಕಿಂ ಲಭೇ?||

ತಾ|| ಎಲೈ ಸಖೀಜನರೇ! ನನಗೆ ಆಪ್ತರಾದ ನಿಮಗಾದರೂ ಒಂದು ಮಾತನ್ನು ನಾನು ಹೇಳೋಣವೆಂದರೆ ಅದಕ್ಕೂ ಅವಕಾಶವಿಲ್ಲದೆ ಇದೆ. ಅಯ್ಯೋ! ನನ್ನ ದುಃಖವು ಇಷ್ಟು ದುಸ್ಸಹವಾಗಿದೆ. ಪುಣ್ಡರೀಕಾಕ್ಷನಾಗಿಯೂ ನನಗೆ ವಞ್ಚಕನಾಗಿಯೂ, ನಿತ್ಯಸೂರೀಶ್ವರನಾಗಿಯೂ, ಇರುವ ಸ್ವಾಮಿಯನ್ನು ಕಂಡು ನಷ್ಟವಾಗಿರುವ ನನ್ನ ಕೈಬಳೆಗಳನ್ನೂ, ನನ್ನ ಸ್ತ್ರೀತ್ವಾದಿ ಗುಣಪೂರ್ತಿಯನ್ನೂ ಪುನಃ ಹೊಂದಬೇಕೆಂದು ಎಷ್ಟುಕಾಲದಿಂದ ನಾನು ಕ್ಲೇಶಪಡುತ್ತಿದೇನೆ!

(೩) ಕಾಲಮಿಳೈಕ್ಕಿಲಲ್ಲಾಲ್ ವಿನೈಯೇನ್ ನಾನಿಳೈಕ್ಕಿನ್ಱಿಲನ್
ಕಣ್ಡುಕೊಣ್ಮಿನ್,
ಞಾಲಮುಱೈಯು ಪ್ಪೞಿಶುಮನ್ದೇನ್ ನನ್ನುದಲೀರಿನಿ
ನಾಣಿತ್ತಾನೆನ್,
ನೀಲಮಲರ್ ನೆಡುಮ್ಶೋದಿಶೂೞ್ನ್ದ
ನೀಣ್ಡಮುಕಿಲ್ವಣ್ಣನ್ ಕಣ್ಣನ್ಕೊಣ್ಡ,
ಕೋಲವಳೈಯೊಡು ಮಾಮೈ ಕೊಳ್ವಾನೆತ್ತನೈಕಾಲಮುಮ್
ಕೂಡಚ್ಚೆನ್ಱೇ.

ಪ್ರ|| ನೀಲಮಲರ್-ನೀಲವರ್ಣವಾಗಿ ವಿಸ್ತೃತವಾದ, ನೆಡುಮ್ಶೋದಿ-ಮಹಾ ತೇಜಸ್ಸಿನಿಂದ, ಶೂೞ್ನ್ದ-ಪರಿವೃತವಾದ, ನೀಣ್ಡಮುಕಿಲ್-ಮಹಾಮೇಘ

ದಂತೆ ಇರುವ, ವಣ್ಣನ್-ಬಣ್ಣವುಳ್ಳ, ಕಣ್ಣನ್-ಕೃಷ್ಣನು, ಕೊಣ್ಡು-ಅಪಹರಿಸಿದ, ಕೋಲವಳೈಯೊಡು-ರಮ್ಯವಾದ ಕೈಬಳೆಯೊಡನೆ, ಮಾಮೈ-ನನ್ನ ಕಾನ್ತಿಯನ್ನೂ, ಎತ್ತನೈಕಾಲಮುಮ್-ಎಷ್ಟು ದೀರ್ಘಕಾಲದಿಂದ, ಕೂಡಚ್ಚೆನ್ಱು-ಕೂಡ ಹೋಗಿ, ಕೊಳ್ವಾನ್-ಪುನಃ ಸಮ್ಪಾದಿಸುವುದಕ್ಕಾಗಿ, ಞಾಲಮ್ ಅಱಿಯ-ಲೋಕವೆಲ್ಲಾ ತಿಳಿಯುವಂತೆ, ಪೞಿಚುಮನ್ದೇನ್-ನಿನ್ದೆಯ ಭಾರವನ್ನು ಹೊತ್ತಿದೇನೆ. ನಲ್ನುದಲೀರ್-ರಮ್ಯಲಲಾಟವುಳ್ಳ ಸಖೀಜನರೇ!, ಇನಿ-ಇನ್ನುಮೇಲೆ, ನಾಣಿತ್ತಾನ್ ಎನ್-ಲಜ್ಜೆಪಟ್ಟು ತಾನೇ ಏನು ಪ್ರಯೋಜನ? ಕಾಲಮ್ ಇಳೈಕ್ಕಿಲ್ ಅಲ್ಲಾಲ್-ಕಾಲವು ಕೃಶವಾಗಿ ನಾಶಹೊಂದುವುದಲ್ಲದೆ, ಏನ್ನೈಯೇನ್ ನಾನ್-ಪಾಪಿನಿಯಾದ ನಾನು, ಇಳೈಕ್ಕಿನ್ಱಿಲೇನ್ - ಕೃಶಿಯಾಗಿ ಲೀನೆಯಾಗಿಲ್ಲ. ಕಣ್ಡುಕೊಣ್ಮಿನ್ - ಇದನ್ನು ನೀವು ತಿಳಿದುಕೊಳ್ಳಿರಿ.

( ಸ-ಗಾ-ರ || )—

ನೀಲಾಮ್ಭೋದನಿಭೋಜ್ಜ್ವಲಾಮಲತನುಃ ಕೃಷ್ಣೋಽಪಹರನ್ಮೇ ತನೋಃ
ಕಾನ್ತಿಂ ಕಙ್ಕಣಯುಗ್ಮಮಪ್ಯಹಮಹೋ! ತತ್ಪ್ರಾಪ್ತಯೇ ಚಾನು ತಮ್|
ಗತ್ವಾ ಚಾಪ್ಯಭವಂ ಮನೋಜ್ಞವದನಾ (ಃ)! ಲೋಕಾಪವಾದಾಸ್ಪದಂ!
ಲಜ್ಜಾ ಮೇಽಸ್ತಿ ವೃಥಾಽದ್ಯ! ಕಾಲನುತಿಗಾಃ ಪಾಪಾ ನ ಲೀನಾಽಸ್ಮ್ಯಹಮ್||

ತಾ|| ನೀಲಮೇಘವರ್ಣನಾದ ಕೃಷ್ಣನು ನನ್ನ ಕೈಬಳೆಗಳನ್ನೂ ದೇಹಕಾನ್ತಿಯನ್ನೂ ಅಪಹರಿಸಿ ಇರುವುದರಿಂದ, ಅವುಗಳನ್ನು ಪುನಃ ಸಮ್ಪಾದಿಸುವುದಕ್ಕಾಗಿ ನಾನು ಲೋಕವೆಲ್ಲಾ ತಿಳಿಯುವಂತೆ ನಿನ್ದೆಯಭಾರವನ್ನು ಹೊತ್ತಿದೇನೆ. ರಮ್ಯಲಲಾಟವುಳ್ಳ ಸಖೀಜನರೇ! ಇನ್ನುಮೇಲೆ ನಾನು ಲಜ್ಜೆಪಟ್ಟು ಏನುಫಲ? ಕಾಲವು ಕೃಶವಾಗಿ ಹೋಗುತ್ತಿರುವುದಲ್ಲದೆ ನಾನು ಕೃಶೆಯಾಗಿ ಲಯಿಸಲಿಲ್ಲ. ಇದನ್ನು ನೀವು ತಿಳಿದುಕೊಳ್ಳಿರಿ.

(೪) ಕೂಡಚ್ಚೆನ್ಱೇನಿನಿ ಯೆನ್ಕೊಡುಕ್ಕೇನ್ ಕೋಲ್ವಳೈ
ನೆಞ್ಜತ್ತೊಡಕ್ಕಮೆಲ್ಲಾಮ್,
ಪಾಡಲ್ ತೊೞಿಯುಮಿೞನ್ದು ವೈಕಲ್ ಪಲ್ವಳೈಯಾರ್ಮುನ್
ಪರಿಶೞಿನ್ದೇನ್,
ಮಾಡಕ್ಕೊಡಿಮದಿಳ್ ತೆನ್ಕುಳನ್ದೈ ವಣ್ಕುಡಪಾಲ್ನಿನ್ಱ
ಮಾಯಕ್ಕೂತ್ತನ್,
ಆಡಲ್ಪಱವೈ ಯುಯರ್ತ್ತ ವೆಲ್ಪೋರಾೞಿ ವಲವನೈ
ಯಾದರಿತ್ತೇ.

ಪ್ರ॥ ಮಾಡಮ್ - ಉಪ್ಪರಿಗೆಗಳನ್ನೂ, ಕೊಡಿಮದಿಳ್ - ಧ್ವಜಗಳೊಡನೆ ಕೂಡಿದ ಪ್ರಾಕಾರಗಳನ್ನೂ ಉಳ್ಳ, ತೇ ಕುಳನ್ದೈ-ದಕ್ಷಿಣದಲ್ಲಿರುವ ತಿರುಕ್ಕುಳನ್ದೈ ಯೆಂಬ ಕ್ಷೇತ್ರದಲ್ಲಿ, ಪಣ್-ಉದಾರವಾದ, ಕುಡಪಾಲ್-ಪಶ್ಚಿಮದಿಕ್ಕಿನಲ್ಲಿ, ನಿನ್ರ-ನಿಂತಿರುವ, ಮಾಯಕ್ಕೂತ್ತ-ಆಶ್ಚರ್ಯ ಚೇಷ್ಟಿತಗಳುಳ್ಳ ಸ್ವಾಮಿಯು, ಆಡಲ್ ಪುಳ್ವೈ-ಜಯಶಾಲಿಯಾದ ಗರುಡನನ್ನು, ಉಯರ್ತ್ತ - ಹತ್ತಿ ಸಂಚರಿಸುವ, ವೆಲ್‌ಪೋರ್-ಶತ್ರುಗಳನ್ನು ಜಯಿಸುವ ಯುದ್ಧಸನ್ನದ್ಧವಾದ, ಆಳಿ-ಚಕ್ರಾಯುಧ ವನ್ನು, ವಲವನ್ಗೆ-ದಕ್ಷಿಣಹಸ್ತದಲ್ಲಿ ಧರಿಸಿರುವ ಕೃಷ್ಣನನ್ನು, ಆಸೈಪಟ್ಟು-ಆಶೆಪಟ್ಟು, ಕೂಡ ಶೆನ್ರೇ-ಕೂಡ ಹೋದೆನು. ಕೋಲ್‌ವಳೈ-ರಮಣೀಯವಾದ ಬಳೆಗಳೂ, ನೆಞ್ಜಮ್ ತೊಡಕ್ಕಮೆಲ್ಲಾಮ್ - ಮನಸ್ಸು ಮೊದಲಾದುವುಗಳೆಲ್ಲಾ, ಪಾಡು ಅರು ಒಳಿಯ-ನನ್ನ ಪಕ್ಕದಲ್ಲಿ ಇಲ್ಲದಂತೆ, ಇಳನ್ದು-ಅವುಗಳನ್ನೆಲ್ಲಾ ಸೋತು, ಪಲ್‌ವಳೈಯಾರ್ ಮುನ್-ಅನೇಕ ಬಳೆಗಳುಳ್ಳ ಸ್ತ್ರೀಜನರ ಮುಂದೆ, ವೈಕಲ್-ಪ್ರತಿದಿನವೂ, ಪರಿಶು ಆಳಿನ್ದೇನ್-ನನ್ನ ಶೀಲವನ್ನೂ ಸೋತುಬಿಟ್ಟೆನು. ಇನಿ ಎನ್ ಕೊಡುಕ್ಕೇನ್-ಇನ್ನು ಏನನ್ನು ಕೊಡಬಲ್ಲೆನು ?

( ಸ- ಗಾ-ರ ॥ )—

ಪ್ರಾಸಾದೈರ್ವಲಯೈರ್ಧ್ವಜೈಶ್ಚ ಭರಿತೇ ದಾಕ್ಷೇ ಕುಳನ್ದಾಹ್ವಯೇ
ರಮ್ಯೇ ತಂ ನಗರೇ ವಿಚಿತ್ರಚರಿತಂ ಜಿಷ್ಣುಂ ಚ ತಾರ್ಕ್ಷ್ಯಧ್ವಜಮ್ ।
ಶ್ರೀಶಂ ಚಕ್ರಧರಂ ಸಮುಚ್ಯ ತಮನು ಪ್ರಾಪ್ತಾ ಸ್ವಯಂ ಚೇತಸಾ
ಹೀನಾಽಹಂ ಕರಕಙ್ಕಣೈಶ್ಚ? ಕಿಮಿತೋ ದದ್ಯಾಂ ಸ್ವಶೀಲಂ ವಿನಾ ? ॥

ತಾ॥ ಉನ್ನತ ಪ್ರಾಸಾದಗಳಿಂದಲೂ ಧ್ವಜಗಳುಳ್ಳ ಪ್ರಾಕಾರಗಳಿಂದಲೂ ಕೂಡಿದ ದಕ್ಷಿಣದಿಕ್ಕಿನಲ್ಲಿರುವ ತಿರುಕ್ಕುಳನ್ದೈಯೆಂಬ ದಿವ್ಯಕ್ಷೇತ್ರದಲ್ಲಿ ಪಶ್ಚಿಮದಿಕ್ಕಿನಲ್ಲಿ ನಿಂತಿರುವ ಮಾಯಾಚೇಷ್ಟಿತನಾದ ಗರುಡವಾಹನನಾದ ಶ್ರೀಚಕ್ರಪಾಣಿಯನ್ನು ಆಶೆಪಟ್ಟು ಕೂಡಹೋಗಿ, ನಾನು ನನ್ನ ಕೈಬಳೆಗಳನ್ನೂ ಮನಸ್ಸು ಮೊದಲಾದುವುಗಳನ್ನೂ ಮತ್ತೂ (ಎಲ್ಲಾ ಸ್ತ್ರೀಜನರಮುಂದೆ) ನನ್ನ ಶೀಲವನ್ನೂ ಸೋತು ನಾಶಪಡಿಸಿಕೊಂಡೆನು ಇನ್ನು ಏನನ್ನು ನಾನು ಕೊಡಬಲ್ಲೆನು ? (ಸರ್ವಸ್ವದಾನವಾಯಿತು.)

(೫) ಆೞಿವಲವನ್ನೈ ಯಾದರಿಪ್ಪುಮಾಙ್ಗವನ್ ನಮ್ಮಿಲ್
ವರವುಮೆಲ್ಲಾಮ್,
ತೋೞಿಯರ್‌ಕಾಳ್ ನಮ್ಮುಡೈಯುಮೇತಾನ್
ಶೊಲ್ಲುವದೋ ವಿಙ್ಗರಿಯದುತಾನ್,
ಊೞಿತೋಱೂೞಿ ಯೊರುವನಾಕ ನನ್ಗುಣರ್ವಾರ್ಕ್ಕು
ಮುಣರಲಾಕಾ,
ಶೂೞಲುಡೈಯ ಶುಡರ್‌ಕೊಳಾದಿ ತೊನ್ಮೈಯಂಶೋದಿ
ನಿನೈಕ್ಕುಮ್ ಕಾಲೇ.

ಪ್ರ॥ ನಿನೈಕ್ಕುಮ್‌ಕಾಲ್ – ಪರಿಶೀಲಿಸಿ ನೋಡಿದರೆ, ನನ್ಗು ಉಣರ್ವಾರ್ಕ್ಕುಮ್-ಚೆನ್ನಾಗಿ ತಿಳಿಯಬಲ್ಲವರಿಗೂ, ಊೞಿತೋಱೂೞಿ-ಕಾಲತತ್ತ್ವವು ಇರುವವರೆಗೂ (ಸಕಲ ಕಲ್ಪಗಳಲ್ಲೂ), ಒರುವನ್ ಆಕ-ಒಬ್ಬನೇ ಆಗಿ, ಉಣರಲ್ ಆಕಾ-ಪರಿಚ್ಛೇದಿಸಿ ನಿರ್ಣಯಿಸಲಶಕ್ಯವಾದ, ಶೂೞಲ್ ಉಡೈಯ-(ಆಶ್ರಿತರನ್ನು ಆಕರ್ಷಿಸುವ) ಮಾಯಾಚೇಷ್ಟಿತವೆಂಬ ಸುಳಿಯುಳ್ಳ, ಶುಡರ್‌ಕೊಳ್-ಮಹಾತೇಜಸ್ಸುಳ್ಳ, ಆದಿ-ಆದಿಕಾರಣಭೂತನೂ, ತೊನ್ಮೈ – ಅನಾದಿಸಿದ್ಧವಾದ, ಅಮ್ ಶೋದಿ-ರಮಣೀಯವಾದ ಜ್ಯೋತಿರ್ಮೂರ್ತಿಯೂ ಆದ, ಆೞಿವಲವನ್ನೈ – ಚಕ್ರವನ್ನು ಬಲಗೈಯಲ್ಲಿ ಧರಿಸಿರುವ ಸರ್ವೇಶ್ವರನನ್ನು, ಆದರಿಪ್ಪುಮ್-ಆಶೆಪಡೋಣವೂ, ಆಙ್ಗು–ಆಗ, ಅವನ್-ಅವನು, ನಮ್ಮಿಲ್ ವರವುಮ್–ನಮ್ಮ ಸಮೀಪಕ್ಕೆ ಬರೋಣವೂ, ಎಲ್ಲಾಮ್ – ಇವುಗಳೆಲ್ಲಾ, ನಮ್ ಉಡೈಯಮೇ ತಾನ್ – ನಮ್ಮಲ್ಲೇ ಇರುವಂತೆ ಆಗಿದೆಯೋ? ತೋೞಿಯರ್‌ಕಾಳ್–ಸಖಿಯರೇ!, ಶೊಲ್ಲುವದೋ–ವಸ್ತುಸ್ಥಿತಿಯನ್ನು ಹೇಳೋಣವೋ (ಅವನ ದೌರ್ಲಭ್ಯಕಥನವೋ), ಇಙ್ಗು ಅರಿಯದು ತಾನ್–ಇಲ್ಲಿ ದುಷ್ಕರವಾದುದು?

( ಸ–ಗಾ–ರ ॥ )—
ಯಾಥಾರ್ಥ್ಯಾತ್ಪರಿಶೀಲನೇ ಸ್ವಯಮಸೌ ಸರ್ವೇಷು ಕಲ್ಪೇಷ್ವಪಿ
ಸ್ವೈರಂ ಚೈಕವಿಧೋಽಪ್ರಮೇಯಮಹಿಮಾ ಜ್ಯೋತಿರ್ಮಯಶ್ಚಾದಿಮಃ।
ಶ್ರೀಶಂ ಚಕ್ರಧರಂ ತಮೇವ ಹಿ ಭಜೇ! ಸೋಽಯಂ ಚ ಮಾಮಾಗತೋ!
ಹೇ ಸಖ್ಯಃ! ಕಿಮಿತಃಪರಂ ಬತ! ವದಾಮ್ಯೇಷಾಽಸ್ಮ್ಯಧನ್ಯಾ ಸ್ವಯಮ್॥

ತಾ॥ ಚೆನ್ನಾಗಿ ಪರಿಶೀಲಿಸಿ ನೋಡಿದರೆ–ಸಕಲ ಕಲ್ಪಗಳಲ್ಲೂ ಏಕಮೂರ್ತಿಯಾಗಿ, ಅಪರಿಚ್ಛಿನ್ನ ಸ್ವಭಾವನಾಗಿ ಸಕಲ ಚೇತನಾಕರ್ಷಕ ದಿವ್ಯ ಚೇಷ್ಟಿತನಾಗಿ,

ಆದಿಕಾರಣಭೂತನಾಗಿ, ದಿವ್ಯತೇಜೋನಿಧಿಯಾಗಿ, ಸರ್ವೇಶ್ವರನಾಗಿರುವ ಶ್ರೀ ಚಕ್ರಪಾಣಿಯನ್ನು ಆಶೆಪಡೋಣವೂ, ಅವನು ನಮ್ಮ ಸಮೀಪಕ್ಕೆ ಬರೋಣವೂ- ಇವುಗಳೆಲ್ಲಾ ನಮ್ಮ ವಶದಲ್ಲೇ ಇರುವಂತೆ ಇದೆಯೆ ? ಎಲೈ ಸಖೀಜನರೇ ! ಸುಲಭನಾಗಿ ತೋರಿದಾಗ್ಯೂ ಅವನು ದುರ್ಲಭನು—ಎಂದು ಹೇಳೋಣವು ಈಗ ದುಷ್ಕರವೋ ? (ಇದೆಲ್ಲಾ ಅವನಿಗೆ ಅನಾದಿಸಿದ್ಧವಷ್ಟೆ !)

(೬) ತೊಲ್ಲೈಯಂಶೋದಿ ನಿನೈಕ್ಕುಮ್‌ಕಾಲೆನ್
ಶೊಲ್ಲಳವನ್ರಿಮೈಯೋರ್ ತಮಕ್ಕುಮ್,
ಎಲ್ಲೈಯಿಲಾದನ ಕೂೞ್ಪ್ಪುಚ್ಚೆಯ್ಯುಮತ್ತಿಱಮ್
ನಿಱ್ಕವೆಮ್ಮಾಮೈ ಕೊಣ್ಡಾನ್,
ಅಲ್ಲಿಮಲರ್‌ತಣ್‌ತುೞಾಯುಮ್ ತಾರಾನಾರ್‌ಕ್ಕಿಡುಕೋ
ಇನಿಪ್ಪೂಶಲ್ ಶೊಲ್ಲೀರ್,
ವಲ್ಲಿವಳವಯಲ್‌ಶೂೞ್ ಕುಡನ್ದೈತ್ತ
ಮಾಮಲರ್‌ಕ್ಕಣ್‌ವಳರ್‌ಕಿನ್ಱ ಮಾಲೇ.

ಪ್ರ॥ ನಿನೈಕ್ಕುಮ್ ಕಾಲ್-ಚಿನ್ತಿಸಿ ನೋಡಿದರೆ, ತೊಲ್ಲೈ-ಅನಾದಿಯಾದ, ಅಮ್‌ಶೋದಿ-ಅವನ ಅತ್ಯನ್ತ ರಮ್ಯವಾದ ತೇಜಸ್ಸು, ಎನ್ ಶೊಲ್ ಅಳವು ಅನ್ಱು-ನನ್ನ ವಾಕ್ಕಿಗೆ ಗೋಚರವಲ್ಲ(ವರ್ಣಿಸಲು ಶಕ್ಯವಲ್ಲ). ಇಮೈಯೋರ್ ತಮಕ್ಕುಮ್-ಬ್ರಹ್ಮಾದಿ ದೇವತೆಗಳಿಗೂ, ಎಲ್ಲೈ ಇಲಾದನ - ಪರಿಮಿತಿಗೆ ಅಗೋಚರವಾದ (ದುರವಗಾಹವಾದ=ನಿವಾರಣಮಾಡಲು ಅಶಕ್ಯವಾದ), ಕೂೞ್ಪ್ಪು - ಸನ್ದೇಹ ಗಳನ್ನು, ಶೆಯ್ಯುಮ್-ಉಂಟುಮಾಡುವ, ಅತ್ತಿಱಮ್ ನಿಱ್ಕ-ಆ ಪರತ್ವಪ್ರಕಾರವು ಇರುತ್ತಿದ್ದಾಗ್ಯೂ, ಎಮ್ ಮಾಮೈಕೊಣ್ಡಾನ್ - ನಮ್ಮ ದೇಹಕಾನ್ತಿಯನ್ನೂ ಅಪಹರಿಸಿದನು. ವಲ್ಲಿ-ಪುಷ್ಪಲತೆಗಳೂ, ವಳಮ್‌ವಯಲ್-ಸಮೃದ್ಧವಾದ ಸಸ್ಯ ಕ್ಷೇತ್ರಗಳೂ, ಶೂೞ್-ಸುತ್ತಿ ಇರುವ, ಕುಡನ್ದೈ - ತಿರುಕ್ಕುಡನ್ದೈಯೆಂಬ (ಕುಂಭ ಕೋಣವೆಂಬ) ದಿವ್ಯದೇಶದಲ್ಲಿ, ಮಾಮಲರ್ ಕಣ್‌ವಳರ್‌ಕಿನ್ಱ-ಮಹಾ ಪದ್ಮಸದೃಶ ನೇತ್ರಗಳೊಡನೆ ಶಯನಮಾಡಿರುವ, ಮಾಲ್-ಆಶ್ರಿತವತ್ಸಲನಾದ ಸ್ವಾಮಿಯು, ಅಲ್ಲಿ ಮಲರ್ - ದಳಗಳೊಡನೆ ಕೂಡಿದ ಪುಷ್ಪಗಳುಳ್ಳ, ತಣ್ ತುೞಾಯುಮ್-ಶೀತಳವಾದ ತುಳಸೀಮಾಲೆಯನ್ನೂ, ತಾರಾನ್-(ನಮಗೆ) ಕೊಡುವುದಿಲ್ಲ. ಇನಿ-ಹೀಗಾದಮೇಲೆ, ಆರ್‌ಕ್ಕು-ಯಾರಿಗೆ, ಪೂಶಲ್ ಇಡುಕೋ-ಮೊರೆಯಿಡೋಣ ? ಶೊಲ್ಲೀರ್-ಹೇಳಿರಿ.

( ಸ–ಗಾ–ರ || )—

ತತ್ತ್ವಂ ಚೇತ್ಪರಿಶೀಲ್ಯತೇ ನನು ಹರೇಸ್ತೇಜಃ ಪರಂ ಭಾಸ್ವರಂ
ವಾಚೋಽತೀತಮಹೋ! ಸುರಾ ಅಪಿ ಚ ತೇ ಭ್ರಾನ್ತಾ ನ ಶಕ್ತಾಸ್ಸ್ಮೃತೌ|
ಏವಂ ಚಾಸ್ತಿ ಪರತ್ವಮಸ್ಯ ! ನನು ಮೇಽಹಾರ್ಷೀಚ್ಚ ಕಾನ್ತಿಂ! ನ ಮೇ
ಹಾ! ದದ್ಯಾತ್ತುಲಸೀಂ ಸುಮಂ ಘಟಪುರೇ ಸುಪ್ತೋಽದ್ಯ! ಕುರ್ಯಾಂ ಕಿಮು?||

ತಾ|| ಪರಿಶೀಲಿಸಿ ನೋಡಿದರೆ ಅನಾದಿಯಾದ ಅತಿರಮಣೀಯವಾದ ಅವನ ತೇಜಸ್ಸು ನನಗೆ ವಾಗತೀತವಾಗಿದೆ (ವರ್ಣಿಸಲಶಕ್ಯವಾಗಿದೆ). ಬ್ರಹ್ಮಾದಿ ದೇವತೆಗಳಿಗೂ ಗೋಚರವಲ್ಲದ ಅಪರಿಮಿತವಾದ ಸನ್ದೇಹಗಳನ್ನು ಉಂಟುಮಾಡುತ್ತಿರುವ ಅವನ ಪರತ್ವಮಹಿಮೆಯು ಪ್ರಕಾರವು ಇದ್ದಾಗ್ಯೂ ನಮ್ಮ ದೇಹಕಾನ್ತಿಯನ್ನೂ ಅಪಹರಿಸಿರುತ್ತಾನೆ. ಪುಷ್ಪಲತಾ – ಸಸ್ಯ ಕ್ಷೇತ್ರಾದಿ ಪರಿವೃತವಾದ ತಿರುಕ್ಕುಡನ್ದೈ ಎಂಬ ದಿವ್ಯದೇಶದಲ್ಲಿ ಶಯನಮಾಡಿರುವ ಆಶ್ರಿತವತ್ಸಲನು ತನ್ನ ತುಳಸೀಮಾಲೆಯನ್ನೂ ಕೂಡ ನಮಗೆ ಕೊಡುವುದಿಲ್ಲ ಹೀಗಿರುವಲ್ಲಿ ನಾವು ಯಾರಲ್ಲಿ ಮೊರೆಯಿಡೋಣ ? ಹೇಳಿರಿ !

(೭) ಮಾಲರಿ ಕೇಶವನ್ ನಾರಣನ್ ಶೀಮಾದವನ್
ಗೋವಿನ್ದನ್ ವೈಕುನ್ದನೆನ್ಱು,
ಓಲಮಿಡವೆನ್ನೈಪ್ಪಣ್ಣಿ ವಿಟ್ಟಿಟ್ಟೊನ್ಱುಮುರುವುಮ್
ಶುವಡುಮ್ ಕಾಟ್ಟಾನ್,
ಏಲಮಲರ್ ಕ್ಕುೞಲನ್ನೈಮೀರ್ ಕಾಳೆನ್ನುಡೈ
ತೋೞಿಯರ್ ಕಾಳ್ ಶೆಯ್ ಕೇನ್,
ಕಾಲಮ್ ಪಲಶೆನ್ಱುಮ್ ಕಾಣ್ಬದಾಣೈಯುನ್ಗಳೋಡೆನ್ಗಳಿಡೈ
ಯಿಲ್ಲೈಯೇ.

ಪ್ರ|| ಮಾಲ್–ಆಶ್ರಿತರಲ್ಲಿ ವತ್ಸಲನಾಗಿಯೂ, ಅರಿ–ಅವರ ಪಾಪಹರನಾಗಿಯೂ ಇರುವ, ಕೇಶವನ್–ರಮ್ಯವಾದ ಕೇಶಪಾಶವುಳ್ಳವನೂ, ನಾರಣನ್ ನಾರಾಯಣನೂ, ಶೀಮಾದವನ್–ಲಕ್ಷ್ಮೀನಾಥನೂ, ಗೋವಿನ್ದನ್ – ಗೋಪಾಲಕನೂ, ವೈಕುನ್ದನ್–ಪರಮಪದನಾಥನೂ, ಎನ್ಱು ಎನ್ಱು–ಎಂದು ಅನೇಕಾವೃತ್ತಿ ಹೇಳಿ, ಓಲಮ್ ಇಡ–ಕೂಗಿಕೊಳ್ಳುವಂತೆ, ಎನ್ನೈ ಪಣ್ಣಿ–ನನ್ನನ್ನು ಮಾಡಿ, ವಿಟ್ಟು ಇಟ್ಟು–ಕೈ ಬಿಟ್ಟು ಹೋಗುವಂತೆ ಮಾಡಿ, ಒನ್ಱುಮ್–ಒಂದು ಪ್ರಕಾರದಲ್ಲೂ, ಉರುವುಮ್ – ತನ್ನ

ರೂಪವನ್ನೂ, ಶುವಡುಮ್-ಗುರುತನ್ನೂ, ಕಾಟ್ಟಾ-ತೋರಿಸುವುದಿಲ್ಲ. ಏಲಮ್-ಸುಗನ್ಧ ತೈಲವನ್ನೂ, ಮಲರ್-ಪುಷ್ಪಗಳನ್ನೂ ಧರಿಸಿರುವ, ಕುೞಲ್-ಕೇಶಗಳುಳ್ಳ, ಅನ್ನೈಮೀರ್ಕಾಳ್-ಜನನಿಯರೇ!, ಎನ್ನುಡೈ ತೋೞಿಯರ್ಕಾಳ್-ನನ್ನ ಸಖೀ ಜನರೇ!, ಎನ್ ಶೆಯ್‌ಗೇನ್-ಏನುಮಾಡಲಿ?, ಕಾಲಕಾಲಮ್ ಶೆನ್ಱುಮ್-ಅನೇಕ ಕಾಲವು ಕಳೆದಾಗ್ಯೂ, ಆಣೈ-ಅವನಮೇಲೆ ಆಣೆಯೇ, ಕಾಣ್ಬದು-ಕಾಣುವುದು ; ಉಙ್ಗಳೋಡು-ನಿಮ್ಮೊಡನೆ, ಎಙ್ಗಳ್ ಇಡೈ-ನಮ್ಮ ಸಮ್ಬನ್ಧವು, ಇಲ್ಲೈ-ಇಲ್ಲ.

( ಸ-ಗಾ-ರ ॥ )—

ಭಕ್ತಾನಾಮಘಹೃಚ್ಚ ಕೇಶವವಿಭುರ್ನಾರಾಯಣೋ ಮಾಧವೋ
ಗೋವಿನ್ದಃ ಪರಮಃ ಪ್ರಭುಃ ಕಿಲ ಹರಿರ್ವೈಕುಣ್ಠ ಇತ್ಯೇವ ಚ ।
ಸ್ತೋತಾಽಹಂ ಬಹುನಾಮಭಿಶ್ಚ! ಹರಿಣಾ ತ್ಯಕ್ತೋಽಸ್ಮಿ! ರೂಪಂ ನಿಜಂ
ಸೋಽಯಂ ನೈವ ಚ ದರ್ಶಯೇದ್ಯದಿ ಶಪೇ! ಮಾತ್ರಾಳಿಸಙ್ಗೋ ನ ಮೇ॥

ತಾ॥ ಆಶ್ರಿತರಲ್ಲಿ ವತ್ಸಲನಾಗಿಯೂ ಅವರ ಪಾಪಹರನಾಗಿಯೂ ಇರುವ ಸ್ವಾಮಿಯನ್ನು ಕೇಶವ-ನಾರಾಯಣ-ಶ್ರೀ ಮಾಧವ-ಗೋವಿನ್ದ-ವೈಕುಣ್ಠನಾಥ-ಎಂದು ಅನೇಕಾವೃತ್ತಿ ಹೇಳಿ ನಾನು ಕೂಗಿಕೊಳ್ಳುವಂತೆ ಮಾಡಿ, ಕೈಬಿಟ್ಟು ಹೋಗುವಂತೆ ನನ್ನನ್ನು ಇಟ್ಟು, ಅವನು ಒಂದು ವಿಧವಾಗಿಯೂ ನನಗೆ ತನ್ನ ರೂಪವನ್ನೂ ಗುರುತನ್ನೂ ತೋರಿಸುವುದಿಲ್ಲ. ಸುಗನ್ಧ ತೈಲವನ್ನೂ ಪುಷ್ಪಗಳನ್ನೂ ಧರಿಸಿರುವ ಜನನಿಯರೇ! ಸಖೀಜನರೇ! ನಾನೇನು ಮಾಡಲಿ? ಚಿರಕಾಲವಾದಾಗ್ಯೂ ಅವನಮೇಲೆ ಆಣೆಯೇ ಕಾಣುವುದು. ನಿಮಗೂ ನನಗೂ ಸಮ್ಬನ್ಧವು ಇಲ್ಲ.

(೮) ಇಡೈಯಿಲ್ಲೈ ಯಾನ್ವಳರ್ತ್ತಕಿಳಿಕಾಳ್
ಪೂವೈಕಾಳ್ ಕುಯಿಲ್ಕಾಳ್ ಮಯಿಲ್ಕಾಳ್,
ಉಡೈಯನಮ್ಮಾಮೈಯುಮ್ ಶಙ್ಗುಮ್
ನೆಞ್ಜುನಿಱೈವುಮೊೞಿಯ ಪೊಟ್ಟಾದ ಕೊಣ್ಡಾನ್,
ಅಡೈಯುಮ್ ವೈಕುನ್ದಮುಮ್
ಪಾಱ್ಕಡಲುಮೆಞ್ಞನವೆಱ್ಪುಮವೈ ನಣಿಯ,
ಕಡೈಯಱಪ್ಪಾಶಙ್ಗಳ್ ವಿಟ್ಟಪಿನ್ನೈ ಯನ್ನಿ ಯವನವೈ
ಕಾಣ್ಕೊಣ್ಡಾನೇ.

ಪ್ರ॥ ಯಾೞವೞರ್ತ್ತ – ನಾನು ಬೆಳೆಸಿದ, ಕಿಳಿಕಾಳ್–ಗಿಣಿಗಳೇ !, ಪೂವೈ ಕಾಳ್–ಪೂವೈಪಕ್ಷಿಗಳೇ !, ಕುಯಿಲ್‌ಕಾಳ್ – ಕೋಕಿಲಪಕ್ಷಿಗಳೇ !, ಮಯಿಲ್ ಕಾಳ್–ನವಿಲುಗಳೇ !, ಇಡೈ ಇಲ್ಲೈ – ನಿಮಗೆ ನನ್ನ ಕಡೆ ಒಂದು ಅವಕಾಶವೂ ಇಲ್ಲ. ನಮ್ಮುಡೈ–ನಮ್ಮ, ಮಾಮೈಯುಮ್ – ಕಾನ್ತಿಯನ್ನೂ, ಶಙ್ಗಮ್–ಕೈಬಳೆಗಳನ್ನೂ, ನೆಞ್ಜಮ್–ಮನಸ್ಸನ್ನೂ, ಒನ್ಱುಮ್–ಒಂದೂ (ಸ್ವಲ್ಪವೂ), ಒೞಿಯ ಒಟ್ಟಾದು–ಅವಶಿಷ್ಟವಾಗದಂತೆ, ಕೊಣ್ಡಾರ್–ಅಪಹರಿಸಿದನು. ಅಡೈಯುಮ್–(ದುರವಗಾಹವಾಗಿ) ಸೇರಿರುವ, ವೈಕುನ್ದಮುಮ್ – ಪರಮಪದವೂ, ಪಾಲ್ ಕಡಲುಮ್–ಕ್ಷೀರಾಬ್ಧಿಯೂ, ಅಞ್ಜನವೆಱ್ಪುಮ್–ಅಂಜನಾದ್ರಿಯೂ (ಶೇಷಾಚಲವೂ), ಅವೈ–ಅವುಗಳೆಲ್ಲಾ, ನಣಿಯ–ಸಮೀಪಿಸಿ ಅನುಭವಿಸಲು ಯಾವ ಕೊರತೆಯೂ ಇಲ್ಲ. ಪಾಶಙ್ಗಳ್–ಬೇರೆ ವಿಷಯಪಾಶಗಳನ್ನು, ಕಡೈಯಱ–ಬೇರಿನೊಂದಿಗೆ ನಷ್ಟವಾಗುವಂತೆ, ವಿಟ್ಟಪಿನ್ನೈ ಅನ್ಱಿ–ಬಿಟ್ಟಹೊರತು, ಅವರ್ – ಅವನು, ಅವೈ–ಆಸ್ಥಾನಭೋಗಗಳನ್ನು, ಕಾಣ್‌ಕೊಡಾರ್–ತೋರಿಸಲಾರನು.

( ಸ–ಗಾ–ರ ॥ )—

ಮತ್ಪುಷ್ಟಾ ಹಿ ಶುಕಾಶ್ಚ ಕೋಕಿಲಮಯೂರಾದ್ಯಾ ದ್ವಿಜಾ ನೈವ ವಃ
ಸಙ್ಗೋ ಮಯ್ಯಹಹಾದ್ಯ ಕಾನ್ತಿ–ವಲಯ–ಸ್ವಾನ್ತಾದಿಹಾರೀ ಮಮ ।
ಯತ್ರಾಸ್ತೇ ಪರಮಂ ಪದಂ ತದಪಿ ಚ ಕ್ಷೀರಾಬ್ಧಿ–ಶೇಷಾಚಲೌ
ಸರ್ವಂ ಪ್ರಾಪ್ಯಮಹೋ! ತಥಾಽಪಿ ಸುಲಭಂ ನ ಸ್ಯಾತ್ತು ಪಾಶೋ ಯದಿ॥

ತಾ॥ ನಾನು ಬೆಳೆಸಿದ ಗಿಣಿಗಳೇ ! ಪೂವೈಪಕ್ಷಿಗಳೇ ! ಕೋಕಿಲಪಕ್ಷಿಗಳೇ ! ನವಿಲುಗಳೇ ! ನಿಮಗೆ ನನ್ನ ಕಡೆ ಯಾವ ಅವಕಾಶವೂ ಇಲ್ಲ. ನಮ್ಮ ಕಾನ್ತಿಯನ್ನೂ ಕೈಬಳೆಗಳನ್ನೂ ಮನಸ್ಸನ್ನೂ ಅವನು ನಿಶ್ಶೇಷವಾಗಿ ಅಪಹರಿಸಿದನು. ಅವನನ್ನು ಪರಮಪದ – ಕ್ಷೀರಾಬ್ಧಿ – ಅಞ್ಜನಾದ್ರಿ—ಇವುಗಳಲ್ಲೆಲ್ಲಾ ಸಮೀಪಿಸಿ ಅನುಭವಿಸಲು ಯಾವ ಕೊರತೆಯೂ ಇಲ್ಲ. ಬೇರೆ ವಿಷಯ ಪಾಶಗಳನ್ನೆಲ್ಲಾ ಸಮೂಲವಾಗಿ ಬಿಟ್ಟಹೊರತು ಅವನು ಆಸ್ಥಾನಗಳ ಭೋಗಗಳನ್ನು ನಮಗೆ ತೋರಿಸಲಾರನು.

4

(೯) ಕಾಣ್‌ಕೊಡುಪ್ಪಾನಲ್ಲನಾರ್‌ಕ್ಕುಮ್ ತನ್ನೈ
ಕ್ಕೈಶೆಯ್ಯಪ್ಪಾಲದೋರ್ ಮಾಯಮ್‌ತನ್ನಾಲ್,
ಮಾಣ್‌ಕುಱಳ್ ಕೋಲವಡಿವು ಕಾಟ್ಟಿ ಮಣ್ಣುಮ್ ವಿಣ್ಣುಮ್
ನಿಱೈಯಮಲರ್‌ನ್ದ,
ಶೇಣ್‌ಶುಡರ್‌ತ್ತೋಳ್‌ಕಳ್ ಪಲತೞೈತ್ತ
ತೇವಪಿರಾರ್ಕ್ಕೆನ್ನಿಱೈವಿನೋಡು,
ನಾಣ್‌ಕೊಡುತ್ತೇನಿನಿ ಯೆನ್ ಕೊಡುಕ್ಕೇನೆನ್ನುಡೈ
ನನ್ನುದಲ್ ನಙ್ಗೈಮೀರ್‌ಕಾಳ್.

ಪ್ರ॥ ಆರ್‌ಕ್ಕುಮ್-ಯಾರಿಗೂ, ತನ್ನೈ-ತನ್ನನ್ನು, ಕಾಣ್‌ಕೊಡುಪ್ಪಾನಲ್ಲನ್-ತೋರಿಸದೆ ಇರುವವನು, ಮಾಯಮ್ ತನ್ನಾಲ್-(ತನ್ನ) ಮಾಯಾಚೇಷ್ಟಿತದಿಂದ, ಕೈಶೆಯ್-ಕೈಕೆಲಸಕ್ಕೆ, ಅಪ್ಪಾಲದು-ಸಾಧ್ಯವಾಗದಹಾಗೆ, ಓರ್-ಅದ್ವಿತೀಯವಾದ, ಕೋಲಮ್ - ರಮಣೀಯತೆಯುಳ್ಳ, ಮಾಣ್-ಯಾಚಕರೂಪಿಯಾದ, ಕುಱಳ್ ವಡಿವು-ವಾಮನವೇಷವನ್ನು, ಕಾಟ್ಟಿ-ತೋರಿಸಿ, ಮಣ್ಣುಮ್-ಭೂಲೋಕವೂ, ವಿಣ್ಣುಮ್-ದ್ಯುಲೋಕವೂ, ನಿಱೈಯ-ತುಂಬುವಂತೆ, ಮಲರ್‌ನ್ದ-ಬೆಳೆದ, ಶೇಣ್ ಶುಡರ್-ಉತ್ಕೃಷ್ಟಕಾನ್ತಿಯುಳ್ಳ, ಪಲತೋಳ್‌ಕಳ್ - ಅನೇಕ ಬಾಹುಗಳೂ, ತೞೈತ್ತ-ಚೆನ್ನಾಗಿ ಬೆಳೆದ, ತೇವಪಿರಾಱ್ಕು - ದೇವನಾಯಕನಿಗೆ, ಎನ್ ನಿಱೈವಿನೋಡು-ನನ್ನ ಸ್ತ್ರೀತ್ವಗುಣಪೂರ್ತಿಯೊಡನೆ, ನಾಣ್-ಲಜ್ಜೆಯನ್ನೂ, ಕೊಡುತ್ತೇನ್-ಕೊಟ್ಟೆನು. ಇನಿ-ಇನ್ನುಮೇಲೆ, ಎನ್ ಕೊಡುಕ್ಕೇನ್-ಏನನ್ನು ಕೊಡಬಲ್ಲೆನು ?, ಎನ್ನುಡೈ-ನನ್ನ, ನಲ್‌ನುದಲ್-ರಮ್ಯವಾದ ಲಲಾಟವುಳ್ಳ, ನಙ್ಗೈಮೀರ್‌ಕಾಳ್-ಸಖೀಜನರೇ !

( ಸ-ಗಾ-ರ ॥ )—

ದುರ್ದರ್ಶೋಽಸ್ತಿ ಹಿ ಯಶ್ಚ ಕಸ್ಯ ಜಗತಾಂ ದಿವ್ಯಾಕೃತಿರ್ವಾಮನೋ
ಭೂಮ್ಯಾಂ ಚಾಪಿ ದಿವಿ ಪ್ರವೃದ್ಧತನುರೇವಾಸೌ ಹಿ ದೇವಾಧಿಪಃ ।
ತಸ್ಮೈ ಮೇ ತನುಕಾನ್ತಿರರ್ಪಿತತಮಾ ! ಲಜ್ಜಾಽಪಿ ಮೇಽದ್ಯಾರ್ಪಿತಾ !
ಕಿಂ ವಾಽನ್ಯತ್ತು ದದಾಮಿ ಹನ್ತ ? ವದತ ಪ್ರೇಷ್ಠಾಸ್ತು ಸಖ್ಯೋ ಮಮ ॥

ತಾ॥ ಯಾರಿಗೂ ತನ್ನನ್ನು (ತನ್ನ ಮಹಿಮೆಯನ್ನು) ತೋರಿಸದೆ ಇರುವ ಮಾಯಾಚೇಷ್ಟಿತನಾದ ಅಕೃತ್ರಿಮ ರಮಣೀಯತೆಯುಳ್ಳ ಯಾಚಕನಾದ ವಾಮನನ ವೇಷವನ್ನು ತೋರಿಸಿ, ಭೂಲೋಕವೂ ದ್ಯುಲೋಕವೂ ಪೂರ್ಣವಾಗುವಂತೆ ಬೆಳೆದ

ದೀರ್ಘಬಾಹುಗಳುಳ್ಳ ದೇವನಾಯಕನಿಗೆ, ನಾನು ನನ್ನ ಸ್ತ್ರೀತ್ವಪೂರ್ತಿಯೊಡನೆ ಲಜ್ಜೆಯನ್ನೂ ಕೊಟ್ಟುಬಿಟ್ಟೆನು (ಎಲ್ಲವನ್ನೂ ಸೋತುಬಿಟ್ಟೆನು). ಇನ್ನು ಏನನ್ನು ಕೊಡಬಲ್ಲೆನು? ನನ್ನ ರಮ್ಯಲಲಾಟವುಳ್ಳ ಸಖೀಜನರೇ! (ನೀವೇ ಹೇಳಿರಿ.)

(೧೦) ಎನ್ನುಡೈ ನನ್ನುದಲ್ ನಙ್ಗೈಮೀರ್‌ಕಾಳ್ ಯಾನಿನಿ
ಚ್ಚೆಯ್‌ವದೆನ್ನೆ ಞ್ಞನ್ನೆ,
ನಿನ್ನಿಡೈಯೇನಲ್ಲೇನೆನ್ರು ನೀಙ್ಗಿ ನೇಮಿಯುಮ್
ಶಙ್ಗುಮಿರುಕೈ ಕ್ಕೊಣ್ಡು,
ಪನ್ನೆಡುಮ್ ಶೂಟ್‌ಶುಡರ್ ನಾಯಿಱ್ರೋಡು
ಪಾಲ್‌ಮದಿಯೇನ್ದಿ ಯೋರ್‌ಕೋಲನೀಲ,
ನನ್ನೆಡುಮ್‌ಕುನ್ರಮ್ ವರುವದೊಪ್ಪಾನ್ ನಾಣ್‌ಮಲರ್
ಪ್ಪಾದಮಡೈನ್ದದುವೇ.

ಪ್ರ|| ಎನ್ನುಡೈ-ನನ್ನ, ನಲ್‌ನುದಲ್-ರಮ್ಯಲಲಾಟವುಳ್ಳ, ನಙ್ಗೈಮೀರ್ ಕಾಳ್-ಸಖೀಜನರೇ!, ಯಾನ್ ಇನಿಶೆಯ್ವದು ಎನ್-ನಾನು ಇನ್ನು ಮಾಡುವುದು ಏನು?. ಎನ್ ನೆಞ್ಜು-ನನ್ನ ಮನಸ್ಸು, ನಿನ್-ನಿನಗೆ, ಇಡೈಯೇನ್ ಅಲ್ಲೇನ್ ಎನ್ರು-(ನಾನು) ಸಾಧನವಾಗುವುದಿಲ್ಲವೆಂದು, ಎನ್ನೈ-ನನ್ನನ್ನು, ನೀಙ್ಗಿ-ಬಿಟ್ಟುಹೋಗಿ, ನೇಮಿಯುಮ್-ಚಕ್ರವನ್ನೂ, ಶಙ್ಗುಮ್-ಶಂಖವನ್ನೂ, ಇರುಕೈ-ಎರಡು ಕೈಗಳಲ್ಲೂ, ಕೊಣ್ಡು-ಧರಿಸಿಕೊಂಡು, ಪಲ್‌ನೆಡು-ಅನೇಕವಾಗಿ ಪ್ರಬಲವಾದ, ಶೂ಴್‌ಶುಡರ್-ಸುತ್ತಲೂ ಇರುವ ಕಾನ್ತಿಯುಳ್ಳ, ನಾಯಿಱ್ರೋಡು - ಸೂರ್ಯನೊಡನೆ, ಪಾಲ್-ಶುಭ್ರವಾದ, ಮದಿ-ಚನ್ದ್ರನನ್ನೂ, ಏನ್ದಿ-(ತನ್ನ ತಿರಸ್ಸಿನಲ್ಲಿ) ಧರಿಸಿಕೊಂಡು, ಓರ್-ಅದ್ವಿತೀಯವಾದ, ಕೋಲಮ್-ರಮಣೀಯವಾದ, ನೀಲಮ್-ನೀಲವಾದ, ನಲ್-ವಿಲಕ್ಷಣವಾದ, ನೆಡುಮ್ ಕುನ್ರಮ್-ಉನ್ನತವಾದ ಪರ್ವತವು, ವರುವದು ಒಪ್ಪಾನ್-ಬರುವಂತೆ ತೋರುತ್ತಿರುವ ಸ್ವಾಮಿಯ, ನಾಣ್‌ಮಲರ್-ಅಭಿನವ ಪದ್ಮ ಸದೃಶವಾದ, ಪಾದಮ್-ಪಾದಗಳನ್ನು, ಅಡೈನ್ದದು-ಸೇರಿತು.

( ಸ-ಗಾ-ರ || )—

ಹೇ ಸಖ್ಯಸ್ಸುಲಲಾಟದೇಶರುಚಿರಾಃ! ಕಿಂ ವಾಽದ್ಯ ಕುರ್ಯಾಮಹಂ ?
ಚೇತೋ ಮೇ ನ ವಶಂ ಭವೇಯಮಿತಿ ಮಾಂ ತ್ಯಕ್ತ್ವಾಽನು ಗತ್ವಾ ಚ ತಮ್|
ಪಾಣಿದ್ವನ್ದ್ವಧೃತ-ಸ್ವಶಙ್ಖ-ವಿಮಲಶ್ರೀಚಕ್ರಸಂಶೋಭಿನ-
ಶ್ಚನ್ದ್ರಾರ್ಕಾಙ್ಕಿತ-ಶೃಙ್ಗ-ನೀಲಗಿರಿ-ಸಙ್ಕಾಶಸ್ಯ ಸಕ್ತಂ ಪದೇ||

ತಾ॥ ನನ್ನ ರಮ್ಯಲಲಾಟವುಳ್ಳ ಸಖೀಜನರೇ! ನಾನು ಇನ್ನು ಮಾಡುವುದೇನು? ನನ್ನ ಮನಸ್ಸು "ನಾನು ನಿನಗೆ ಸಾಧನವಾಗುವುದಿಲ್ಲ"—ಎಂದು ನನ್ನನ್ನು ಬಿಟ್ಟುಹೋಗಿ, ಶಂಖಚಕ್ರಧರನಾಗಿ, ಚನ್ದ್ರಸೂರ್ಯರನ್ನು ಶಿಖರದಲ್ಲಿ ಧರಿಸಿರುವ ನೀಲಮಣಿಪರ್ವತವು ನಡೆದುಬರುವಂತೆ ಇರುವ ಸ್ವಾಮಿಯ ಅಭಿನವ ಪಾದಪದ್ಮಯುಗಳವನ್ನು ಸೇರಿತು.

(೧೧) ಪಾದಮಡೈವದರ್ ಪಾಶತ್ತಾಲೇ ಮಱ್ಱು
ವಲ್‌ಪಾಶಙ್ಗಳ್ ಮುಱ್ಱವಿಟ್ಟು,
ಕೋದಿಲ್‌ಪುಕರ್ ಕ್ಕಣ್ಣನ್ ತನ್ನಡಿಮೇಲ್
ವಣ್‌ಕುರುಕೂರ್ ಚ್ಚಡಕೋಪನ್ ಶೊನ್ನ,
ತೀದಿಲನ್ದಾದಿ ಯೋರಾಯಿರತ್ತುಳ್ಳಿವೈಯುಮೋರ್—
ಪತ್ತಿಶೈಯೊಡುಮ್ ವಲ್ಲಾರ್,
ಯಾದುಮೋರ್ ತೀದಿಲರಾಕಿ
ಯಿಙ್ಗುಮಙ್ಗುಮೆಲ್ಲಾಮಮೈವಾರ್‌ಕಳ್ ತಾಮೇ.

ಪ್ರ॥ ಪಾದಮ್-(ಅವನ) ಪಾದಗಳನ್ನು, ಅಡೈವದರ್‌ಪಾಶತ್ತಾಲೇ-ಹೊಂದಬೇಕೆಂಬ ಆಶೆಯಿಂದ, ಮಱ್ಱುವಲ್‌ಪಾಶಙ್ಗಳ್- ಇತರ ಪ್ರಬಲವಾದ ಪಾಶಗಳನ್ನು, ಮುಱ್ಱವಿಟ್ಟು – ಪೂರ್ಣವಾಗಿ ಬಿಟ್ಟು, ಕೋದು ಇಲ್ – ದೋಷರಹಿತವಾದ, ಪುಕರ್—ಕೀರ್ತಿಯುಳ್ಳ, ಕಣ್ಣನ್ ತನ್ ಅಡಿಮೇಲ್-ಶ್ರೀಕೃಷ್ಣನ ಪಾದಗಳ ವಿಷಯವಾಗಿ, ವಣ್ ಕುರುಕೂರ್ – ಉದಾರವಾದ ಕುರುಕಾಪುರಿಯ ನಿರ್ವಾಹಕರಾದ, ಶಡಕೋಪನ್-ಶ್ರೀ ಶಠಾರಿಮುನಿಯು, ಶೊನ್ನ–ಸ್ತೋತ್ರರೂಪವಾಗಿ ರಚಿಸಿದ, ತೀದು ಇಲ್–ಶಬ್ದಾರ್ಥ ದೋಷಗಳಿಲ್ಲದ, ಅನ್ದಾದಿ-ಅನ್ತಾದಿ ಪ್ರಬನ್ಧರೂಪವಾದ, ಓರ್ ಆಯಿರತ್ತುಳ್ – ಅನ್ಯಾದೃಶವಾದ ಸಹಸ್ರಪದ್ಯಮಾಲೆಯೊಳು, ಇವೈಯುಮ್ ಓರ್‌ಪತ್ತು–ಈ ವಿಲಕ್ಷಣವಾದ ದಶಕವನ್ನು, ಇಶೈಯೊಡುಮ್ – ಗಾನದೊಡನೆ, ವಲ್ಲಾರ್-ಹಾಡಬಲ್ಲವರು, ಯಾದುಮ್ ಓರ್ ತೀದು ಇಲರಾಕಿ-ಯಾವವಿಧವಾದ ಒಂದು ದೋಷವೂ ಇಲ್ಲದವರಾಗಿ, ಇಙ್ಗುಮ್ – ಈ ಲೀಲಾವಿಭೂತಿಯಲ್ಲೂ, ಅಙ್ಗುಮ್ – ಆ ನಿತ್ಯವಿಭೂತಿಯಲ್ಲೂ, ತಾಮೇ ಎಲ್ಲಾಮ್ ಅಮೈವಾರ್‌ಕಳ್-ತಾವೇ ಎಲ್ಲಾ ಶ್ರೇಯಃಪರಂಪರೆಯನ್ನೂ ಹೊಂದುವರು.

( ಸ-ಗಾ-ರ ॥ )—

ಪಾದಾಮ್ಭೋಜಸಮಾಶ್ರಯೈಕಹೃದಯಸ್ಸನ್ತ್ಯಕ್ತಕಾಮಾನ್ತರಃ
ಕೃಷ್ಣಂ ನಿರ್ಮಲಕೀರ್ತಿಮೇವ ಸತತಂ ಸ್ತೋತುಂ ಶಠಾರಿರ್ಮುನಿಃ ।
ಸಾಹಸ್ರಂ ಕುರುಕಾಪುರಪ್ರಭುರಸಾವಾಹಾತ್ರ ಗಾಯನ್ತಿ ಯೇ
ತಚ್ಛೇದಂ ದಶಕಂ ಭಜನ್ತಿ ಕುಶಲಂ ತೇಽತ್ರಾಪ್ಯಮುತ್ರ ಸ್ವಯಮ್ ॥

ತಾ॥ ಸರ್ವೇಶ್ವರನ ಪಾದಗಳನ್ನು ಆಶ್ರಯಿಸಬೇಕೆಂಬ ಆಶೆಯಿಂದ ಇತರ ಪಾಶಗಳನ್ನೆಲ್ಲಾ ಸಮಗ್ರವಾಗಿ ಬಿಟ್ಟು, ನಿರ್ದೋಷವಾದ ಕೀರ್ತಿಯುಳ್ಳ ಶ್ರೀಕೃಷ್ಣನ ಪಾದಗಳನ್ನು ಸ್ತುತಿಸಲು ಶ್ರೀಶಠಾರಿಮುನಿಯಿಂದ ರಚಿತವಾದ ಅನ್ತಾದಿ ರೂಪವಾದ ಸಹಸ್ರಪದ್ಯಮಾಲೆಯೊಳು ಈ ವಿಲಕ್ಷಣವಾದ ದಶಕವನ್ನು ಹಾಡ ಬಲ್ಲವರು ಯಾವವಿಧವಾದ ದೋಷವೂ ಇಲ್ಲದವರಾಗಿ ಉಭಯ ವಿಭೂತಿಗಳಲ್ಲೂ ಸರ್ವ ಶ್ರೇಯಃಪರಂಪರೆಯನ್ನೂ ಹೊಂದುವರು.

( ದ್ರ-ಉ-ಸಂ ॥ )—

ಸಂಪ್ರಾಪಕೇಽಪಿ ಚ ವಿಭೌ ನಿಜವಾಞ್ಛಿತಾರ್ಥ-
ಪ್ರಾಪ್ತೇರ್ವಿಘಾತ ಇತರೇಷು ಚ ಪಾಶಲೇಶಃ ।
ಸ್ವಸ್ಯೇತಿ ಶಙ್ಕಿತಮನಾಸ್ಸ್ವಹಿತೇಽಪಿ ವರ್ಗೇ
ಸ್ವಸ್ಮಿನ್ನಪಿ ಪ್ರವಣತಾಂ ಮುಮುಚೇ ದ್ವಿತೀಯೇ ॥

( ದ್ರ-ಉ-ತಾ-ರ ॥ )—

ತಾರ್ಕ್ಷ್ಯೋದ್ಯದ್ವಾಹನತ್ವಾಚ್ಛುಭನಯನತಯಾ ನೀಲಮೇಘಾಕೃತಿತ್ವಾ-
ದಾಶ್ಚರ್ಯೋಚ್ಚೇಷ್ಟಿತತ್ವಾದ್ಧುರವಧರತಯಾ ಯೋಗಿಭಿರ್ನಿರ್ಜರೈಶ್ಚ ।
ಸ್ವೇಷು ವ್ಯಾಮುಗ್ಧಭಾವಾತ್ ಪ್ರತಿಹತಿವಿರಹಾದ್ದುರ್ಜನಾದೃಶ್ಯಭಾವಾ-
ನ್ನಿಸ್ಸಙ್ಗಾನಾಂ ಜನಾನಾಂ ಸುಲಭತಮ ಇತಿ ಪ್ರಾಹ ನಾಥಶ್ಶಠಾರಿಃ ॥

(ಈ ದ್ವಿತೀಯದಶಕದ ಸಾರಾಂಶ—)

ಈ ಎರಡನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು—ತನ್ನ ಸಖೀಜನರನ್ನೂ ಮಾತೃವರ್ಗವನ್ನೂ ಕುರಿತು ಈ ನಾಯಕಿಯು ತನ್ನ ವಿರಹವೇದನೆಯನ್ನು ವರ್ಣಿಸಲಾರಂಭಿಸಿ, ಶ್ರೀ ವೇಂಕಟೇಶ್ವರನನ್ನು ಆಶೆ ಪಟ್ಟು ಹೋದಾಗ ತನ್ನ ಕೈಬಳೆಗಳನ್ನೂ ದೇಹಕಾನ್ತಿಯನ್ನೂ ಕಳೆದುಕೊಂಡು ದನ್ನೂ, ಅವುಗಳನ್ನು ಚಿರಕಾಲದಿಂದ ಹುಡುಕುತ್ತಿರುವುದನ್ನೂ, ತಾನು ಲಜ್ಜೆ

ಯನ್ನೂ ಬಿಟ್ಟು ಕೃಶೆಯಾಗುತ್ತಿರುವುದನ್ನೂ, ತಿರುಕ್ಕುಳನ್ದೈಯೆಂಬ ದಿವ್ಯಕ್ಷೇತ್ರದ ಸ್ವಾಮಿಯನ್ನು ಆಶಿಪಟ್ಟು ತನ್ನ ಸರ್ವಸ್ವವನ್ನೂ ಸೋತುಬಿಟ್ಟದನ್ನೂ, ಸರ್ವೇಶ್ವರನಾದ ಶ್ರೀ ಚಕ್ರಪಾಣಿಯನ್ನು ಸುಲಭನೆಂದು ಆಶಿಪಡೋಣವು ಅನುಚಿತವೆಂಬುದನ್ನೂ, ತಿರುಕ್ಕುಡನ್ದೈಯೆಂಬ ದಿವ್ಯದೇಶದ ಸ್ವಾಮಿಯು ತುಳಸೀಮಾಲೆಯನ್ನೂ ಕೂಡ ತನಗೆ ಕೊಡುವುದಿಲ್ಲವೆಂಬುದನ್ನೂ, ಕೇಶವ-ನಾರಾಯಣ-ಮಾಧವ-ಗೋವಿನ್ದ-ವೈಕುಣ್ಠನಾಥ—ಎಂದು ಮೊರೆಯಿಟ್ಟಾಗ್ಯೂ ಅವನು ಕೈಬಿಟ್ಟದಾನೆಂಬುದನ್ನೂ, (ತಾನು ಬೆಳಿಸಿದ ಪಕ್ಷಿಗಳನ್ನು ನೋಡಿ) ಪರವಾಪದ-ಕ್ಷೀರಾಬ್ಧಿ—ಅಂಜನಾದ್ರಿಗಳ ಭೋಗಗಳೂ ತನಗೆ ದುರ್ಲಭಗಳೆಂಬುದನ್ನೂ, ಶ್ರೀ ವಾಮನಾವತಾರದ ದಿವ್ಯಸೌನ್ದರ್ಯವನ್ನು ನೋಡಿ ತಾನು ಎಲ್ಲವನ್ನೂ ಸೋತುಬಿಟ್ಟದನ್ನೂ, ತನ್ನ ಮನಸ್ಸು ಶಂಖಚಕ್ರಧರನಾದ ಅವನ ಪಾದಗಳಲ್ಲೇ ಸಕ್ತವಾಗಿದೆಯೆಂಬುದನ್ನೂ ಕ್ರಮೇಣ ವಿಶದೀಕರಿಸುವಂತೆ ವರ್ಣಿಸಿ, ಈ ದಶಕದ ಪಠನದಿಂದ ಸಕಲ ದೋಷರಹಿತವಾದ ಶ್ರೇಯಃಪರಂಪರೆಯೂ ಉಭಯ ವಿಭೂತಿಗಳಲ್ಲೂ ಉಂಟಾಗುವುದೆಂದು ಹೇಳಿರುತ್ತಾರೆ.

---

## ಶ್ರೀಃ

## ಅಷ್ಟಮಶತಕದಲ್ಲಿ—ತೃತೀಯದಶಕ.

### (ಅಙ್ಗುಮಿಙ್ಗುಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀ ಪರವಾಸುದೇವನಾದ ಭಗವನ್ತನಿಗೆ ಮಂಗಳಾಶಾಸನವಂ ಮಾಡುವವರು ಯಾರೂ ಇಲ್ಲವೆಂದು ವಿಷಣ್ಣರಾಗಿರಲು, ನಿತ್ಯಮುಕ್ತಾದಿ ಪರಿವಾರವರ್ಗಗಳು ಮಂಗಳಾಶಾಸನವಂ ಮಾಡುತ್ತಿದಾರೆಂದು ಭಗವನ್ತನಿಂದ ಸಮಾಧಾನಪಡಿಸಲ್ಪಡುತ್ತಾರೆ.)

---

(೧) ಅಙ್ಗುಮಿಙ್ಗುಮ್ ವಾನವರ್ ದಾನವರ್ ಯಾವರುಮ್,
ಎಙ್ಗುಮಿನ್ನೈಯೆನ್ರು ಉನ್ನೈಯರಿಯಕಿಲಾದಲಱ್ಱಿ,
ಅಙ್ಗಮ್ ಶೇರುಮ್ ಪೂಮಕಳ್ ಮಣ್ಮಕಳಾಯ್ಮಕಳ್,
ಶಙ್ಗುಶಕ್ಕರಕ್ಕೈಯವನೆನ್ಬರ್ ಶರಣಮೇ.

ಪ್ರ॥ ಅಙ್ಗುಮ್-ಊರ್ಧ್ವಲೋಕಗಳಲ್ಲೂ, ಇಙ್ಗುಮ್-ಭೂಲೋಕದಲ್ಲೂ, ಎಙ್ಗುಮ್-(ಪಾತಾಳಾದಿ) ಸಕಲಪ್ರದೇಶಗಳಲ್ಲೂ, ವಾನವರ್-(ಅನುಕೂಲರಾದ) ದೇವತೆಗಳೂ, ದಾನವರ್ - (ಪ್ರತಿಕೂಲರಾದ) ಅಸುರರೂ, ಯಾವರುಮ್-ಮನುಷ್ಯಾದಿಗಳೆಲ್ಲರೂ, ಉನ್ನೈ-ನಿನ್ನನ್ನು, ಇನ್ನೈಯ್ಯ-ಇಂತಹ ಭೋಗ್ಯನು, ಎನ್ರು-ಎಂದು, ಅತ್ತಿಯಕಿಲಾದು-ತಿಳಿಯಲಾರದೆ, ಅಲರ್ತ್ತಿ - (ನಿನ್ನ ಸರ್ವಶಕ್ತತ್ವಾದಿ ಮಹಿಮೆಯನ್ನು) ಉದ್ಘೋಷಿಸಿ, ಪೂಮಕಳ್-ಪದ್ಮೋದ್ಭವೆಯಾದ ಲಕ್ಷ್ಮೀದೇವಿಯೂ, ಮಣ್‌ಮಕಳ್ - ಭೂದೇವಿಯೂ, ಆಯ್‌ಮಕಳ್ - ಗೋಪಕನ್ಯೆಯಾದ ನೀಳಾದೇವಿಯೂ, ಅಙ್ಗುಮ್ - (ನಿನ್ನ ಸೌನ್ದರ್ಯಾದಿಗಳಿಗೆ ವಶ್ಯೆಯಾಗಿ) ನಿನ್ನ ಶರೀರದಲ್ಲಿ, ಶೇರುಮ್-ಸೇರಿರುವಂತೆ, ಶಙ್ಗುಶಕ್ಕರಕ್ಕೈಯರ್ವ-ಶಙ್ಖಚಕ್ರಗಳನ್ನು ಹಸ್ತಗಳಲ್ಲಿ ಧರಿಸಿರುವವನು, (ಎಂದು ಅನುಭವಿಸದೆ), ಶರಣಮೇ-ಕ್ಷುದ್ರವಾದ ತಮ್ಮ ಇಷ್ಟಾರ್ಥಕ್ಕೆ ಸಾಧನಭೂತನೇ, ಎನ್ಬರ್-ಎಂದು ಹೇಳುವರು.

( ಸ-ಗಾ-ರ ॥ )—

ತತ್ರಾತ್ರ ಚಾಪ್ಯಭಿತ ಏವ ಚ ದೇವರಕ್ಷೋ-
ಮರ್ತ್ಯಾದಯೋಽಪಿ ತವ ಸನ್ಮಹಿಮಾನಭಿಜ್ಞಾಃ ।
ತ್ವಾಂ ಶ್ರೀಧರಾಧಿಪ! ಸುಗೋಪಸುತಾಧವೇಹ
ಶ್ರೀಶಙ್ಖಚಕ್ರಧರಮೇವ ಶರಣ್ಯಮಾಹುಃ ॥

ತಾ॥ ಸ್ವರ್ಗಾದಿಲೋಕಗಳಲ್ಲೂ ಭೂಲೋಕದಲ್ಲೂ ಇತರ ಸರ್ವದೇಶಗಳಲ್ಲೂ ಇರುವ ದೇವ ದಾನವ ಮನುಷ್ಯಾದಿ ಸಕಲಾತ್ಮವರ್ಗಗಳೂ ನಿನ್ನ ಮಹಿಮೆಯನ್ನು ತಿಳಿಯಲಾರದೆ, ಶ್ರೀಭೂನೀಳಾನಾಯಕನಾಗಿಯೂ, ಶಙ್ಖಚಕ್ರಧರನಾಗಿಯೂ ಪರಮಪ್ರಾಪ್ಯನಾಗಿರುವ ನಿನ್ನನ್ನು ತಮ್ಮ ಕ್ಷುದ್ರಪುರುಷಾರ್ಥಕ್ಕೆ ಸಾಧನಭೂತನೆಂದು ತಿಳಿಯುತ್ತಾರೆ.

(೨) ಶರಣಮಾಕಿಯ ನಾನ್ಮತ್ತೈ ನೂಲ್‌ಕಳುಮ್ ಶಾರಾದೇ,
ಮರಣಮ್ ತೋಱ್ಱಮ್ ವಾೞ್ಪಿಣಿ ಮೂಪ್ಪೊಡಿವೈ
ಮಾಯ್‌ತ್ತೋಮ್,
ಕರಣಪ್ಪಲ್‌ಪಡೈ ಪಱ್ಱಱ ವೋಡುಮ್ ಕನಲಾೞಿ,
ಅರಣತ್ತಿಣ್‌ಪಡೈ ಯೇನ್ದಿಯ ಈಶರ್ಕ್ಕಾಳಾಯೇ.

ಪ್ರ|| ಶರಣಮಾಕಿಯ – (ತ್ರೈಗುಣ್ಯನಿಷ್ಠರಿಗೆ) ಸಾಧನವಾದ, ನಾನ್ಮಱೈ–ನಾಲ್ಕು ವೇದಗಳೆಂಬ, ನೂಲ್ ಕಳುಮ್–ಶಾಸ್ತ್ರಗಳನ್ನು, ಶಾರಾದೇ–ಆಶ್ರಯಿಸದೆ, ಕರಣ–ಯುದ್ಧಸಾಧನಗಳುಳ್ಳ, ಪಲ್–ಬಹುವಿಧವಾದ, ಪಡೈ–ಶತ್ರುಸೈನ್ಯಗಳು, ಪಱ್ಱು ಅಱ ಓಡುಮ್–ನಿರಾಶ್ರಯರಾಗಿ ಓಡುವಂತೆ, ಕನಲ್–ಜ್ಯೋತಿರ್ಮಯವಾದ, ಆೞಿ–ಚಕ್ರವೆಂಬ, ಅರಣ–ಭಕ್ತರಕ್ಷಕವಾದ, ತಿಣ್ ಪಡೈ – ದೃಢವಾದ ಆಯುಧವನ್ನು, ಏನ್ದಿಯ–ಧರಿಸಿರುವ, ಈಶಱ್ಕು–ಸರ್ವೇಶ್ವರನಿಗೆ, ಆಳಾಯೇ–ಶೇಷಭೂತರಾಗಿಯೇ, ಮರಣಮ್–ಮೃತಿಯೂ, ತೋಱ್ಱಮ್–ಜನನವೂ, ವಾನ್ ಪಿಣಿ–ಮಹಾವ್ಯಾಧಿಯೂ, ಮೂಪ್ಪು–ವಾರ್ಧಕವೂ, ಎನ್ಱಿವೈ–ಎಂಬಿವುಗಳನ್ನು, ಮಾಯ್ ತ್ತೋಮ್–ನಾಶಪಡಿಸಿದೆವು.

( ಸ–ಗಾ–ರ || )—

ಸೇನಾಗಣಪ್ರಬಲಭೀತಿಕರಂ ಸ್ವಚಕ್ರಂ
ಭಕ್ತಾತ್ಮರಕ್ಷಣಚಣಂ ವಹತೋ ಮುರಾರೇಃ ।
ದಾಸಾ ವಯಂ ಶ್ರುತಿಚತುಷ್ಟಯದೂರನಿಷ್ಠಾ
ಮುಕ್ತಾಸ್ಸ್ವಯಂ ಹಿ ಮೃತಿ–ಜನ್ಮ–ಜರಾದಿ–ರೋಗೈಃ ||

ತಾ|| (ಆತ್ಮಾನುಭವ ನಿಷ್ಠರಾದ ಕೇವಲರನ್ನು ಕುರಿತು ಹೇಳುತ್ತಾರೆ.) ತ್ರೈಗುಣ್ಯನಿಷ್ಠರಿಗೆ ಸಾಧನವಾದ ನಾಲ್ಕುವೇದಗಳನ್ನು ಆಶ್ರಯಿಸದೆ ನಾವು ಚಕ್ರಪಾಣಿಯಾದ ಸರ್ವೇಶ್ವರನಿಗೇ ಶೇಷಭೂತರಾಗಿ ಇದ್ದಾಗ್ಯೂ, ನಾವೂ ಕೂಡ ಕೇವಲರಾದ ನಿಮ್ಮಂತೆ ಜನನ–ಮರಣ–ವ್ಯಾಧಿ–ಜರಾದಿಗಳನ್ನು ಜಯಿಸಿ ಇರುತ್ತೇವಷ್ಟೆ (ನೀವೂ ನಮಗೆ ಸಮಾನರಲ್ಲವೆಂದು ಭಾವವು.)

(೩) ಆಳುಮಾಳಾರಾೞಿಯುಮ್ ಶಙ್ಗುಮ್ ಶುಮಪ್ಪಾರ್ ತಾಮ್,
ವಾಳುಮ್ ವಿಲ್ಲುಮ್ ಕೊಣ್ಡು ಪಿನ್ ಶೆಲ್ವಾರ್ ಮಱ್ಱಿಲ್ಲೈ,
ತಾಳುಮ್ ತೋಳುಮ್ ಕೈಕಳೈ ಯಾರ ತ್ತೊೞು ಕ್ಕಾಣೇನ್,
ನಾಳುಮ್ ನಾಳುಮ್ ನಾಡುವನಡಿಯೇನ್ ಞಾಲತ್ತೇ.

ಪ್ರ|| ಞಾಲತ್ತು–ಪ್ರಪಂಚದಲ್ಲಿ, ಆಳುಮ್–ಮಂಗಳಾಶಾಸನ ಪರರನ್ನೂ, ಆಳಾರ್–ಆಳುವುದಿಲ್ಲ. ತಾಮ್–ತಾವೇ, ಆೞಿಯುಮ್–ಚಕ್ರವನ್ನೂ, ಶಙ್ಗಮ್–ಶಂಖವನ್ನೂ, ಶುಮಪ್ಪಾರ್–ಹೊತ್ತುಕೊಂಡಿರುವರು. (ಆದಾಗ್ಯೂ) ವಾಳುಮ್–ಖಡ್ಗವನ್ನೂ, ವಿಲ್ಲುಮ್–ಧನುಸ್ಸನ್ನೂ, ಕೊಣ್ಡು–ಹೊತ್ತುಕೊಂಡು, ಪಿನ್ ಶೆಲ್ವಾರ್–

ಹಿಂದೆ ಹೋಗುವವರು, ಮಱ್ಱು ಇಲ್ಲ್ಯೆ–ಇನ್ನು ಯಾರೂ ಇಲ್ಲ. ತಾಳುಮ್–ಪಾದಗಳನ್ನೂ, ತೋಳುಮ್ – ಭುಜಗಳನ್ನೂ, ಕೈಕಳ್ಳೆ ಆರ–ನನ್ನ ಕೈಗಳಿಂದ ಸಂಪೂರ್ಣವಾಗಿ, ತೊೞ–ಸೇವೆಮಾಡಲು, ಕಾಣೇ–(ನಾನು) ಅವಕಾಶವನ್ನು ಕಾಣೆನು. ಅಡಿಯೇ–ದಾಸನಾದ ನಾನು, ನಾಳುಮ್ ನಾಳುಮ್–ಪ್ರತಿದಿನವೂ, ನಾಡುವ–ಹುಡುಕುತ್ತಿರುವೆನು.

( ಸ–ಗಾ–ರ ॥ ) —

ಚಕ್ರಂ ಚ ಶಙ್ಖಮಪಿ ಚ ಸ್ವಯಮೇವ ಧೃತ್ವಾ
ಖಡ್ಗಂ ಚ ಚಾಪಮಪಿ ಚ ಸ್ವಯಮುದ್ಬಿಭರ್ತಿ ।
ನಾನ್ಯೋಽಸ್ತಿ ಭೃತ್ಯ ಇತಿ ಹನ್ತ! ನ ಮೇ ಕರಾಭ್ಯಾಂ
ತತ್ಪಾದ-ಬಾಹು-ಪರಿಚಾರವಿಧಿಂ ಹಿ ವೇದ್ಮಿ ॥

ತಾ॥ ಶ್ರೀ ಭಗವನ್ತನು ತನಗೆ ಕಿಙ್ಕರರು ಇದ್ದಾಗ್ಯೂ ಚಕ್ರವನ್ನೂ ಶಂಖವನ್ನೂ ಖಡ್ಗವನ್ನೂ ಧನುಸ್ಸನ್ನೂ ತಾನೇ ಹೊತ್ತುಕೊಂಡು ಸಂಚರಿಸುತ್ತಾನೆ. (ಹಿಂದೆ ಹೋಗುವ ಕಿಂಕರರು ಯಾರೂ ಇಲ್ಲ) ಅವನ ಪಾದಗಳನ್ನೂ ಭುಜಗಳನ್ನೂ ನನ್ನ ಕೈಗಳಿಂದ ಸೇವಿಸಲು ನನಗೆ ಅವಕಾಶವಿಲ್ಲ. ನಾನು ಪ್ರತಿದಿನವೂ ಅವಕಾಶವನ್ನು ಹುಡುಕುತ್ತಿರುವೆನು.

(೪) ಞಾಲಮ್ ಪೋನಕಮ್ ಪಱ್ಱಿ ಯೋರ್
ಮುಱ್ಱಾ ವುರುವಾಕಿ,
ಆಲಮ್ ಪೇರಿಲ್ಯೆ ಯನ್ನವಶಮ್ ಶೆಯ್ಯುಮಮ್ಮಾನೇ,
ಕಾಲಮ್ ಪೇರ್ವದೋರ್ ಕಾರಿರುಳೂೞಿ
ಯೊತ್ತುಳದಾಲ್, ಉನ್
ಕೋಲಮ್ ಕಾರೆೞಿಲ್ ಕಾಣಲುಱ್ಱಾೞುಮ್
ಕೊಡಿಯೇಱ್ಕೇ.

ಪ್ರ॥ ಓರ್–ಅದ್ವಿತೀಯವಾದ, ಮುಱ್ಱಾ–ಅತಿ ಸುನ್ದರವಾಗಿ ಮುಗ್ಧವಾದ, ಉರುವಾಕಿ–ರೂಪವುಳ್ಳವನಾಗಿ, ಞಾಲಮ್ – ಲೋಕವನ್ನೆಲ್ಲಾ, ಪೋನಕಮ್ ಪಱ್ಱಿ- ಭೋಜನಮಾಡಿ, ಆಲಮ್–ಆಲವೆಂಬ, ಪೇರ್–ಹೆಸರುಳ್ಳ, ವಿಶಾಲವಾದ, ಇಲ್ಯೆ–ಎಲೆಯಮೇಲೆ, ಅನ್ನವಶಮ್ ಶೆಯ್ಯುಮ್–ಎಡಗಡೆ ಬಲಗಡೆ ತಿರುಗುತ್ತ ಶಯನಮಾಡಿಸುವ, ಅಮ್ಮಾನೇ–ಸ್ವಾಮಿಯೇ, ಕಾರ್ ಎೞಿಲ್–ಮೇಘದಂತೆ

ಸುನ್ದರವಾದ, ಉರ್ ಕೋಲಮ್-ನಿನ್ನ (ಶರೀರದ) ಅಲಂಕಾರವನ್ನು, ಕಾಣಲ್ ಉಱ್ಱು – ಕಾಣಬೇಕೆಂದು ಆಶೆಪಟ್ಟು, ಅಞ್ಜಿನ್ – ಭಯದಲ್ಲಿ ಮಗ್ನೆಯಾದ, ಕೊಡಿಯೇಱ್ಕು–ಮಹಾ ಪಾಪವುಳ್ಳ ನನಗೆ, ಪೇರ್ವದು–ಪ್ರತಿಕ್ಷಣವೂ ಬದಲಾಯಿಸುತ್ತಿರುವ, ಕಾಲಮ್-ಕಾಲವು, ಓರ್–ಅದ್ವಿತೀಯವಾದ, ಕಾರ್ ಇರುಳ್ – ಮಹಾ ಗಾಢಾನ್ಧಕಾರವುಳ್ಳ ರಾತ್ರಿಯಾದ, ಊೞಿ ಒಕ್ಕು–ಒಂದು ಕಲ್ಪಕ್ಕೆ ಸಮಾನವಾಗಿ, ಉಳದು ಇರುತ್ತಿದೆ.

( ಸ–ಗಾ–ರ ॥ )—

ದಿವ್ಯಾಕೃತಿಸ್ತ್ವಮಖಿಲಂ ಪರಿಭುಜ್ಯ ಲೋಕಂ
ಪತ್ರೇ ವಟಸ್ಯ ಶಯಿತಶ್ಶಿಶುರೇವ ಮುಗ್ಧಃ ।
ತತ್ಸುನ್ದರಾ ತವ ವಪುಶ್ಶ್ರೀ ಪಯೋದನೀಲಂ
ಪಾಪೀ ದಿದೃಕ್ಷುರಶಮುಷ್ಮಿ! ಯುಗಂ ಕ್ಷಣಂ ಮೇ ॥

ತಾ॥ ದಿವ್ಯರೂಪವುಳ್ಳ ನೀನು ಸಕಲಲೋಕಗಳನ್ನೂ ಭಕ್ಷಿಸಿ ವಟಪತ್ರದಲ್ಲಿ ಶಯನಮಾಡಿರುತ್ತೀಯೆ. ನೀಲಮೇಘದಂತೆ ಸುನ್ದರವಾದ ನಿನ್ನ ದೇಹಾಲಂಕಾರವನ್ನು ಕಾಣಬೇಕೆಂದು ಆಶೆಪಟ್ಟು ಭಯದಲ್ಲಿ ಮಗ್ನೆಯಾದ ನನಗೆ ಕ್ಷಣಕಾಲವೂ ಗಾಢಾನ್ಧಕಾರವುಳ್ಳ ಕಲ್ಪದಂತೆ ತೋರುತ್ತಿದೆ.

(೫) ಕೊಡಿಯಾರ್ ಮಾಡಕ್ಕೋಳೂರಕತ್ತುಮ್
ಪುಳಿಙ್ಗುಡಿಯುಮ್,
ಮಡಿಯಾದಿನ್ನೇ ನೀ ತುಯಿಲ್‌ಮೇವಿ ಮಕಿೞ್ನ್ದದು ತಾನ್,
ಅಡಿಯಾರಲ್ಲಲ್ ತವಿರ್‌ತ್ತ ಅಶೈವೋ ವನ್ದೇಲ್, ಇ–
ಪ್ಪಡಿತಾನ್ ನೀಣ್ಡು ತಾವಿಯ ಅಶೈವೋ ಪಣಿಯಾಯೇ.

ಪ್ರ॥ ಕೊಡಿ ಅರ್–ಧ್ವಜಗಳಿಂದ ಭರಿತವಾದ, ಮಾಡ–ಉಪ್ಪರಿಗೆಗಳುಳ್ಳ, ಕೋಳೂರ್–ತಿರುಕ್ಕೋಳೂರಿನ, ಅಕತ್ತುಮ್–ಒಳಗೂ, ಪುಳಿಙ್ಗುಡಿಯುಮ್– ತಿರುಪ್ಪುಳಿಂಗುಡಿಯಲ್ಲೂ, ಮಡಿಯಾದು ಹಿಂತಿರುಗಿಬರದೆ, ಇನ್ನೇ–ಈ ಪ್ರಕಾರವೇ, ತುಯಿಲ್‌ಮೇವಿ – ಶಯನಮಾಡಿದುದರಿಂದ, ನೀ–ನೀನು, ಮಕಿೞ್ನ್ದದು ತಾನ್– ಸನ್ತುಷ್ಟನಾಗಿರೋಣವೇ, ಅಡಿಯಾರ್ – ಭಕ್ತಜನರ, ಅಲ್ಲಲ್–ದುಃಖವನ್ನು, ತವಿರ್‌ತ್ತ–ನಾಶಪಡಿಸಿದ, ಅಶೈವೋ–ಆಯಾಸದಿಂದಲೋ, ಅನ್ದೇಲ್–ಇಲ್ಲದಿದ್ದರೆ, ಇಪ್ಪಡಿ ತಾನ್–ಈ ಭೂಮಿಯನ್ನು, ನೀಣ್ಡು–(ನೀನು) ಬೆಳೆದು, ತಾವಿಯ–ಅಳೆದುಕೊಂಡ, ಅಶೈವೋ–ಆಯಾಸದಿಂದಲೋ, ಪಣಿಯಾಯ್–ಹೇಳು.

( ಸ-ಗಾ-ರ || )—

ಕೋಳೂರ್ಪುರೇಽಪಿ ಚ ಪುಳಿಙ್ಗುಡಿನಾಮ್ನಿ ದಿವ್ಯೇ
ಕ್ಷೇತ್ರೇ ಕಿಲಾಸಿ ಶಯಿತೋ ! ನ ಕಿಲಾಗತೋಽತ್ರ |
ಶ್ರಾನ್ತಿಃ ಕಿಮುದ್ಯ ತವ ಭಕ್ತಜನಾರ್ತಿಭಙ್ಗಾ-
ದಾಹೋಸ್ವಿದತ್ರ ಜಗದಾಕ್ರಮಣಾತ್ಪದಾ ತೇ ? ||

ತಾ|| ತಿರುಕ್ಕೋಳೂರಿನಲ್ಲೂ ತಿರುಪ್ಪುಳಿಂಗುಡಿಯಲ್ಲೂ ನೀನು ಶಯನಮಾಡಿ ಇಲ್ಲಿಗೆ ಬರದೆ ಅಲ್ಲಿಯೇ ಸನ್ತುಷ್ಟನಾಗಿರೋಣವು ಆಶ್ರಿತ ದುಃಖನಿವರ್ತನದಿಂದ ಉಂಟಾದ ಆಯಾಸದಿಂದಲೋ, ತ್ರಿವಿಕ್ರಮಾವತಾರದಲ್ಲಿ ಭೂಮಿಯನ್ನು ಅಳೆದುಕೊಂಡ ಆಯಾಸದಿಂದಲೋ ? ದಯವಿಟ್ಟು ಹೇಳು.

(೬) ಪಣಿಯಾವಮರರ್ ಪಣಿವುಮ್ ಪಣ್ಬುಮ್
ತಾವೇ ಯಾವರ್,
ಅಣಿಯಾರಾ಴ಿಯುಮ್ ಶಙ್ಗುಮೇನ್ದುಮವರ್ ಕಾಣ್ಮಿನ್,
ತಣಿಯಾವೆನ್ನೋಯ್ ಯುಲಕಿಲ್ ತವಿರ್ಪ್ಪಾನ್, ತಿರುನೀಲ
ಮಣಿಯಾರ್ ಮೇನಿಯೋಡೆನ್ ಮನಮ್ ಶೂೞ ವರುವಾರೇ ||

ಪ್ರ|| ಪಣಿಯಾ-ಬೇರೆ ಒಬ್ಬರನ್ನೂ ನಮಸ್ಕರಿಸದ, ಅಮರರ್-ನಿತ್ಯಸೂರಿಗಳ, ಪಣಿವುಮ್-ನಮಸ್ಕಾರಕ್ಕೂ, ಪಣ್ಬುಮ್-ಜ್ಞಾನಾದಿಗುಣಗಳಿಗೂ, ತಾಮೇ ಆಮ್-ತಾವೇ ವಿಷಯವಾಗಿ, ಅಣಿ-ಆಭರಣರೂಪವಾದ, ಆರ್-ಭೋಗ್ಯವಾದ, ಆೞಿಯುಮ್-ಚಕ್ರವನ್ನೂ, ಶಙ್ಗುಮುಮ್-ಶಂಖವನ್ನೂ, ಏನ್ದುಮ್-ಧರಿಸಿರುವ, ಅವರ್ಕಾಣ್ಮಿನ್-ಅವರೇ ; ಉಲಕಿಲ್-ಲೋಕದಲ್ಲಿ, ತಣಿಯಾ-ಶಾನ್ತವಾಗದ, ವೆಮ್-ಕ್ರೂರವಾದ, ನೋಯ್-ವ್ಯಾಧಿಗಳನ್ನು, ತವಿರ್ಪ್ಪಾನ್-ನಾಶಪಡಿಸುವುದಕ್ಕೆ, ತಿರು ಆರ್-ಸೌನ್ದರ್ಯಾದಿ ಸಮ್ಪತ್ಪರಿಪೂರ್ಣವಾದ, ನೀಲಮಣಿ-ನೀಲರತ್ನದಂತೆ ಇರುವ, ಮೇನಿಯೋಡು-ದಿವ್ಯಮಂಗಳವಿಗ್ರಹದೊಡನೆ, ಎನ್ ಮನಮ್ಶೂೞ-ನನ್ನ ಮನಸ್ಸು ಭ್ರಮಿಸುವಂತೆ, ವರುವಾರ್-ಬರುವರು.

( ಸ-ಗಾ-ರ || )—

ಶ್ರೀಸೂರಿವರ್ಯಕುಲವನ್ದ್ಯ ಉದಾರಶೀಲ-
ಶ್ರೀಶಙ್ಖಚಕ್ರವರಭೂಷಣಭೂಷಿತಾಙ್ಗಃ !
ಲೋಕೇಽತ್ರ ದುಸ್ಸಹತಮಾರ್ತಿ-ತತಿಪ್ರಶಾನ್ತ್ಯೈ
ಮಚ್ಚಿತ್ತವಿಭ್ರಮಕರೋ ಮಣಿವರ್ಣ ಏತಿ ||

ತಾ॥ ನಿತ್ಯಸೂರಿ ಸಂಸೇವ್ಯನಾಗಿ ಶಂಖಚಕ್ರಧರನಾಗಿರುವ ಸ್ವಾಮಿಯೇ ಈ ಜಗತ್ತಿನಲ್ಲಿ ನಾನಾವಿಧ ವ್ಯಾಧಿಶಾನ್ತಿಗಾಗಿ ನೀಲಮಣಿವರ್ಣನಾಗಿ ನನ್ನ ಮನಸ್ಸು ಭ್ರಮಿಸುವಂತೆ ಪ್ರತ್ಯಕ್ಷನಾಗಿ ಬರುವನು.

(೭) ವರುವಾರ್ ಶೆಲ್ವಾರ್ ವಣ್ಪರಿಶಾರತ್ತಿರುನ್ದ, ಎನ್
ತಿರುವಾೞ್ಮಾರ್ವರ್ಕ್ಕೆನ್ ತಿಱಮ್ ಶೊಲ್ಲಾರ್ ಶೆಯ್ವದೆನ್,
ಉರುವಾರ್ ಶಕ್ಕರಮ್ ಶಙ್ಗು ಶುಮನ್ದಿಙ್ಗುಮ್ಮೋಡು,
ಒರುಪಾಡುೞಲ್ವಾನೋರಡಿಯಾನುಮುಳನೆನ್ಱೇ.

ಪ್ರ॥ ವರುವಾರ್-(ಅಲ್ಲಿಂದ) ಬರುವವರು, ಶೆಲ್ವಾರ್-(ಇಲ್ಲಿಂದ) ಹೋಗುವವರು, ವಣ್ ಪರಿಶಾರತ್ತು-ತಿರುವಣ್ ಪರಿಶಾರವೆಂಬ ದಿವ್ಯಕ್ಷೇತ್ರದಲ್ಲಿ, ಎನ್-ನನ್ನ ದಾಸ್ಯವನ್ನು ಅಂಗೀಕರಿಸುವುದಕ್ಕೆ, ಇರುನ್ದ- ಬಿಜಯಮಾಡಿರುವ, ತಿರುವಾೞ್ ಮಾರ್ವರ್ಕ್ಕು-ಲಕ್ಷ್ಮಿಯನ್ನು ವಕ್ಷಸ್ಥಲದಲ್ಲಿ ಧರಿಸಿರುವ ಸ್ವಾಮಿಗೆ, ಉರು ಆರ್-ದಿವ್ಯರೂಪವುಳ್ಳ, ಶಕ್ಕರಮ್-ಚಕ್ರವನ್ನೂ, ಶಙ್ಗು-ಶಂಖವನ್ನೂ, ಶುಮನ್ದು-ಹೊತ್ತುಕೊಂಡು, ಇಙ್ಗು-ಈ ಲೀಲಾವಿಭೂತಿಯಲ್ಲಿ, ಉಮ್ಮೋಡು-ನಿಮ್ಮೊಡನೆ, ಒರುಪಾಡು-ಒಂದು ಕಡೆಯಲ್ಲಿ, ಉೞಲ್ವಾನ್-ಸಂಚರಿಸುವವನು, ಓರ್-ಅಸಾಧಾರಣನಾದ, ಅಡಿಯಾನುಮ್ ಒಬ್ಬ ದಾಸನು (ನಾನು), ಉಳನ್-ಇರುವನು, ಎನ್ಱು-ಎಂದು, ಎನ್ ತಿಱಮ್-ನನ್ನ ಸ್ವಭಾವವನ್ನು, ಶೊಲ್ಲಾರ್-ಹೇಳುವುದಿಲ್ಲ. ಶೆಯ್ವದು ಎನ್-(ನಾನು) ಏನುಮಾಡಲಿ ?

( ಸ-೧೨-೮ || )—

ಆಯಾನ್ತಿ ಯಾನ್ತಿ ಕಿಲ ಭಕ್ತಜನಾ ಮಹಾನ್ತೋ
ಲಕ್ಷ್ಮೀಧರಂ ಹೃದಿ ಚ ವಣ್ಪರಿಶಾರಪುರ್ಯಾಮ್ ।
ನಾಥಂ ಚ ಮೇ ಮಮ ದಶಾಂ ನ ವದನ್ತಿ ತೇಽಮಿ-
ತೇ ಶಙ್ಖಚಕ್ರವಹನಾಯ ಭಟೋಽಸ್ತಿ ಚೇತಿ ॥

ತಾ॥ ತಿರುವಣ್ ಪರಿಶಾರವೆಂಬ ದಿವ್ಯಕ್ಷೇತ್ರದಲ್ಲಿ ಬಿಜಯಮಾಡಿರುವ ಶ್ರೀವತ್ಸಲಾಂಛನನಾದ (ತಿರುವಾೞ್ಮಾರ್ವನ್ ಎಂಬ) ಸ್ವಾಮಿಗೆ — "ನಿನ್ನ ಶಂಖಚಕ್ರಗಳನ್ನು ಹೊತ್ತುಕೊಂಡು ಬರುವ ದಾಸನು ಒಬ್ಬನು ಈ ಲೋಕದಲ್ಲಿ ಇದಾನೆ"—ಎಂದು ನನ್ನ ವಿಷಯವನ್ನು ಬರುವವರೂ ಹೋಗುವವರೂ ಯಾರೂ ಹೇಳುವುದಿಲ್ಲ; ಏನುಮಾಡಲಿ ?

(೮) ಎನ್ರೇ ಯೆನ್ನೈ ಯುನ್ನೇರಾರ್ ಕೋಲ ತ್ತಿರುನ್ದಡಿಕ್ಕೀೞ್,
ನಿನ್ರೇ ಯಾಳ್ಚೆಯ್ಯ ನೀ ಕೊಣ್ಡರುಳ ನಿನೈಪ್ಪದು ತಾನ್,
ಕುನ್ರೇೞ್ ಪಾರೇೞ್ ಶೂೞ್ ಕಡಲ್ ಞಾಲಮುೞುವೇೞುಮ್,
ನಿನ್ರೇ ತಾವಿಯ ನೀಳ್‌ಕೞಲಾೞಿ ತ್ತಿರುಮಾಲೇ.

ಪ್ರ॥ ಏೞುಕುನ್ರು – ಸಪ್ತಕುಲಪರ್ವತಗಳನ್ನೂ, ಏೞುಪಾರ್ – ಸಪ್ತದ್ವೀಪಗಳನ್ನೂ, ಶೂೞುಕಡಲ್–ಅವುಗಳನ್ನು ಸುತ್ತಿ ಇರುವ ಸಮುದ್ರಗಳನ್ನೂ, ಏೞು ಞಾಲಮುಮ್–(ಭೂಮಿ ಮೊದಲಾದ) ಸಪ್ತಲೋಕಗಳನ್ನೂ, ಮುೞು–ಸಮ್ಪೂರ್ಣವಾಗಿ, ನಿನ್ರೇ–ನಿಂತಸ್ಥಲದಲ್ಲಿ ನಿಂತೇ, ತಾವಿಯ–ಆಕ್ರಮಿಸಿ ಅಳೆದ, ನೀಳ್‌ಕೞಲ್–ದೀರ್ಘಪಾದಗಳುಳ್ಳ, ಆೞಿ–ಚಕ್ರಧರನಾದ, ತಿರುಮಾಲೇ – ಶ್ರಿಯಃಪತಿಯಾದ ಸ್ವಾಮಿಯೇ!, ಎನ್ನೈ–ನನ್ನನ್ನು, ಉನ್–ನಿನ್ನ, ಏರ್ ಆರ್–ಸೌನ್ದರ್ಯ ಪರಿಪೂರ್ಣವಾದ, ಕೋಲಮ್–ಆಭರಣಕಾನ್ತಿಯುಳ್ಳ, ತಿರುನ್ದು–ದಿವ್ಯವಾದ (ಸುನ್ದರವಾದ), ಅಡಿಕ್ಕೀೞ್ – ಪಾದಗಳ ಕೆಳಗೆ, ನಿನ್ರೇ–ಸ್ಥಿರವಾಗಿ ನಿಂತು, ಆಳ್‌ಶೆಯ್ಯ–ಸೇವೆ ಮಾಡಲು, ನೀಕೊಣ್ಡರುಳ–ನೀನು ಅಂಗೀಕರಿಸಲು, ನಿನೈಪ್ಪದುತಾನ್ ತಕ್ಕ ಸಂಕಲ್ಪವನ್ನು ಮಾಡೋಣವು, ಎನ್ರೇ–ಎಂದಿಗೋ?

( ಸ–ಗಾ–ರ ॥ )—

ಸಪ್ತಾದ್ರಿ–ಸಪ್ತಜಲ–ಮಧ್ಯಗತಾನ್ತರೀಪೈಃ
ಕ್ರಾನ್ತಾ ತ್ವಮೇವ ಜಿತವಾನ್ ಕಿಲ ಸಪ್ತಲೋಕೀಮ್ ।
ಶ್ರೀಶ! ತ್ವದೀಯಶುಭಸುನ್ದರಪಾದಪದ್ಮೇ
ದಾಸಂ ದಯಾಕರ! ಕದಾ ಕುರುಷೇ ಚ ದಾಸ್ಯೇ ? ॥

ತಾ॥ ಸಪ್ತಾದ್ರಿ–ಸಪ್ತದ್ವೀಪ–ಸಪ್ತಸಮುದ್ರ – ಸಪ್ತಲೋಕಾದಿಗಳನ್ನೆಲ್ಲಾ ಆಕ್ರಮಿಸಿ ಅಳೆದುಕೊಂಡ ಚಕ್ರಧರನಾದ ಶ್ರಿಯಃಪತಿಯೇ! ನನ್ನನ್ನು ನಿನ್ನ ಸುನ್ದರವಾದ ಆಭರಣಾಲಂಕೃತವಾದ ಪಾದಗಳ ಕೆಳಗೆ ನಿಂತು ಸೇವೆಮಾಡಲು ಅಂಗೀಕರಿಸುವುದು ಎಂದಿಗೋ?

(೯) ತಿರುಮಾಲ್ ನಾನ್ಮುಕನ್ ಶೆಂಶಡೈಯಾನೆನ್ರಿವರ್‌ಕಳ್, ಎಮ್
ಪೆರುಮಾನ್ ತನ್ಮೈಯೈ ಯಾರರಿಕಿಱ್ಪಾರ್ ಪೇಶಿಯೆನ್,
ಒರುಮಾಮುದಲ್ವಾ ವೂೞಿಪ್ಪಿರಾನೆನ್ನೈ ಯಾಳುಡೈ,
ಕರುಮಾಮೇನಿಯನೆನ್ಪನ್ ಕಾದಲ್ ಕಲಕ್ಕವೇ.

ಪ್ರ॥ ತಿರುಮಾಲ್ – ಲಕ್ಷ್ಮೀನಾಥನೇ!, ನಾನ್ಮುಗನ್ – ಚತುರ್ಮುಖನು, ಶೆಂಶಡೈಯಾನ್ – ರುದ್ರನು, ಎನ್ಱು ಇವರ್‌ಕಳ್ – ಎಂದು ಪ್ರಸಿದ್ಧರಾದ ಇವರು, ಎಮ್‌ಪೆರುಮಾನ್-ನನ್ನ ಸ್ವಾಮಿಯಾದ ನಿನ್ನ, ತನ್ಮೈಯೈ-ಸೌನ್ದರ್ಯಾದಿ ವೈಲಕ್ಷಣ್ಯವನ್ನು, ಅಱಿಕಿಱ್ಪಾರ್-ತಿಳಿಯಬಲ್ಲವರು, ಆರ್-ಯಾರು?. ಎನ್ ಕಾದಲ್-ನನ್ನ ಆಶೆಯು, ಕಲಕ್ಕ-ನನ್ನ ಮನಸ್ಸನ್ನು ಕಲಕಲು, ಒರು-ಅನ್ಯಾದೃಶವಾದ, ಮೂವಾಮುದಲ್ವಾ-ಪರಮಕಾರಣಭೂತನೇ!, ಊೞಿ-(ಕಲ್ಪಾದಿ) ಕಾಲಕ್ಕೆ ಅನುರೂಪವಾದ, ಪಿರಾನ್-ಉಪಕಾರಕನಾದ ಸ್ವಾಮಿಯೇ!, ಎನ್ನೈ ಆಳುಡೈ-ನನ್ನನ್ನು ದಾಸನಾಗಿ ಉಳ್ಳ, ಕರುಮಾಮೇನಿಯನ್-ಶ್ಯಾಮಳವಾದ ವಿಲಕ್ಷಣ ವಿಗ್ರಹವುಳ್ಳವನೇ, ಎನ್ಬನ್-ಎಂದು ಹೇಳುತ್ತಿರುವೆನು. ಪೇಶಿ ಎನ್-ನಿನ್ನ ಸೌಕುಮಾರ್ಯಾದಿಗಳನ್ನು ಕುರಿತು ಹೇಳಿ ಏನುಫಲ (ನಾನು ಹೇಗೆ ವರ್ಣಿಸುವೆನು?)

( ಸ-ಗಾ-ರ ॥ )—

ಶ್ರೀಮನ್! ಚತುರ್ಮುಖಶಿವಾದಯ ಇತ್ಯಮೀ ತ್ವಾಂ
ಮನ್ನಾಥ! ಕೇ ಬತ! ವಿದುರ್ಮಮ ಚಿತ್ತಹಾರಿನ್! ।
ಕಾಲಾನುಕೂಲ! ಶುಭಕಾರಣ! ಮಾಂ ಚ ದಾಸ್ಯೇ
ಕೃತ್ವಾ ವಿಭಾಸಿ ಜಲದಾಭ! ಕಿಮುದ್ಯ ವಚ್ಮಿ? ॥

ತಾ॥ ಎಲೈ ಲಕ್ಷ್ಮೀನಾಯಕನೇ! ಬ್ರಹ್ಮರುದ್ರಾದಿಗಳೂ ಕೂಡ ನಿನ್ನ ಸೌನ್ದರ್ಯಾದಿಗಳನ್ನು ತಿಳಿಯಲಾರರು. ತಿಳಿದವರು ಯಾರು? ನನ್ನ ಆಶೆಯು ಮನಸ್ಸನ್ನೆಲ್ಲಾ ಕಲಕುವಂತೆ ಮಾಡಿರುವ ಪರಮಕಾರಣಭೂತನೇ! ಕಾಲಾನುಕೂಲ ರೂಪಿಯೇ! ನನ್ನ ಕೈಂಕರ್ಯವನ್ನು ಸ್ವೀಕರಿಸುವ ನೀಲಮೇಘಶ್ಯಾಮನೇ!— ಎಂದು ನಾನು ಹೇಳುತ್ತಿರುವೆನು. ನಿನ್ನ ಸೌಕುಮಾರ್ಯಾದಿಗಳನ್ನು ನಾನು ಹೇಗೆ ವರ್ಣಿಸಲಿ?

(೧೦) ಕಲಕ್ಕಮಿಲ್ಲಾ ನಲ್‌ತವ ಮುನಿವರ್ ಕರೈಕಣ್ಡೋರ್,
ತುಳಕ್ಕಮಿಲ್ಲಾ ವಾನವರೆಲ್ಲಾಮ್ ತೊೞುವಾರ್‌ಕಳ್,
ಮಲಕ್ಕಮೆಯ್‌ದ ಮಾಕಡಲ್‌ತನ್ನೈ ಕ್ಕಡೈನ್ದಾನ್ನೈ,
ಉಲಕ್ಕ ನಾಮ್ ಪುಕೞ್‌ಕಿಱ್ಪದೆನ್ ಶೆಯ್‌ವದುರೈಯೀರೇ.

ಪ್ರ|| ಕಲಕ್ಕಮಿಲ್ಲಾ – ಸಾಂಸಾರಿಕ ದುಷ್ಟಸ್ವಭಾವಗಳಿಲ್ಲದ, ನಲ್‌ತವ-ಒಳ್ಳೆಯ (ಜ್ಞಾನರೂಪ) ತಪಸ್ಸುಳ್ಳ, ಮುನಿವರ್ – ಸನಕಾದಿಮುನಿಗಳು, ಕರ್ರೈ ಕಣ್ಡೋರ್–ಸಂಸಾರಸಾಗರದ ಆ ಕಡೇತೀರ (ಪಾರ)ವನ್ನು ಕಂಡ ಮುಕ್ತರೂ, ತುಳಕ್ಕಮಿಲ್ಲಾ – ಚಲನವಿಲ್ಲದ, ವಾನವರ್ – ನಿತ್ಯಸೂರಿಗಳೂ, ಎಲ್ಲಾಮ್–ಇವರೆಲ್ಲರೂ, ತೊಳ್ವಾರ್‌ಕಳ್–ನಿನ್ನನ್ನು ಸೇವಿಸುವವರು; ಮಾಕಡಲ್ ತನ್ನೈ-ಮಹಾ ಸಮುದ್ರವನ್ನು, ಮಲಕ್ಕಮೆಯ್‌ದ-ಕಲಕುವಂತೆ, ಕಡೈನ್ದಾನೈ–ಮಥನ ಮಾಡಿದ ಸರ್ವಶಕ್ತನನ್ನು, ಉಲಕ್ಕ–ಚೆನ್ನಾಗಿ (ಪೂರ್ಣವಾಗಿ) ಕಂಡು, ನಾಮ್ ಪುಕಳ್ ಕಿರ್ಪ್ಪದು–ನಾವು ಸ್ತೋತ್ರಮಾಡಬಲ್ಲೆವು ಎಂಬುದು, ಎನ್ ಶೆಯ್‌ವದು-ಏನುಮಾಡಿದಹಾಗೆ ಆಯಿತು ? ಉರ್ರೈಯಿರ್–ನೀವೇ ಹೇಳಿರಿ.

( ಸ–ಗಾ–ರ || )—

ನಿರ್ದೋಷಶುದ್ಧತಪಸಾ ಮುನಯೋಽಟಿ ಮುಕ್ತಾ
ನಿತ್ಯಾಶ್ಚ ಸೂರಿನಿವಹಾಃ ಕಿಲ ತಂ ಭಜನ್ತಿ |
ಅಸ್ಮಾಭಿರಸ್ಯ ಕಿಮು ವಾರಿಧಿಮನ್ಥನಸ್ಯ
ಸ್ತೋತ್ರಂ ಭವೇತ್ತು ಸುಕರಂ? ವದತಾದ್ಯ ಯೂಯಮ್ ||

ತಾ|| ಸಾಂಸಾರಿಕ ದೋಷರಹಿತರಾದ ಸನಕಾದಿ ಮುನಿಗಳೂ, ಸಂಸಾರ ಸಾಗರವನ್ನು ದಾಟಿದ ಮುಕ್ತರೂ, ನಿಶ್ಚಲರಾದ ನಿತ್ಯಸೂರಿಗಳೂ—ಇವರೆಲ್ಲರೂ ನಿನ್ನನ್ನು ಸೇವಿಸುವರು. ಮಹಾಸಮುದ್ರವನ್ನು ಕಲಕುವಂತೆ ಮಥನಮಾಡಿದ ಸರ್ವಶಕ್ತನನ್ನು ಚೆನ್ನಾಗಿ ಕಂಡು ನಾವು ಸ್ತೋತ್ರಮಾಡಬಲ್ಲೆವು—ಎಂದರೆ ಏನುಮಾಡಿದಹಾಗೆ ಆಯಿತು ? ಇದು ಸಾಧ್ಯವೇ ? ನೀವೇ ಹೇಳಿರಿ.

(೧೧) ಉರ್ರೈಯಾವೆನ್ನೋಯ್ ತವಿರ ಅರುಳ್ ನೀಣ್ಮುಡಿಯಾನ್ನೈ,
ವರ್ರೈಯಾರ್‌ಮಾಡ ಮನ್ನು ಕುರುಕೂರ್ ಚ್ಚಡಕೋಪನ್,
ಉರ್ರೈಯೋಯ್ ಶೊಲ್‌ತೊಡೈ ಯೋರಾಯಿರತ್ತುಳಿಪ್ಪತ್ತುಮ್,
ನಿರ್ರೈಯೇ ವಲ್ಲಾರ್ ನೀಡುಲಕತ್ತು ಪ್ಪಿರವಾರೇ.

ಪ್ರ|| ಉರ್ರೈಯಾ – ಹೇಳಲಶಕ್ಯವಾದ, ವೆಮ್‌ನೋಯ್ – ತೀವ್ರವಾದ ಸನ್ತಾಪವೆಂಬ ನೋವು, ತವಿರ-ನಷ್ಟವಾಗುವಂತೆ, ಅರುಳ್-ಕೃಪೆಮಾಡಿದ, ನೀಳ್ ಮುಡಿಯಾನ್ನೈ–ಉನ್ನತವಾದ ಕಿರೀಟವುಳ್ಳ ಸ್ವಾಮಿಯನ್ನು ಕುರಿತು, ವರ್ರೈ ಆರ್–ಪರ್ವತಗಳಂತೆ ಪರಿಪೂರ್ಣವಾದ, ಮಾಡಮ್‌ಮನ್ನು–ಸೌಧಗಳಿಂದ ಭರಿತವಾದ

ಕುರುಕೂರ್ ಶಡಕೋಪನ್ – ಕುರುಕಾಪುರಿಯ ಶಠಾರಿಮುನಿಯು, ಉರೈ ಏಯ್-ಸೂಕ್ತಿಗಳಿಂದ ಕೂಡಿದ, ಶೊಲ್‌ತೊಡೈ-ಪದ್ಯಮಾಲೆಯಾದ, ಓರ್ ಆಯಿರತ್ತುಳ್-ಒಂದುಸಹಸ್ರ ಪದ್ಯಗಳೊಳು, ಇಪ್ಪತ್ತುಮ್-ಈ ಹತ್ತು ಪದ್ಯಗಳನ್ನು, ನಿರೈಯೇ-ಕ್ರಮವಾಗಿ, ವಲ್ಲಾರ್ – ಪಠನಮಾಡಬಲ್ಲವರು, ನೀಡು – ವಿಸ್ತೀರ್ಣವಾದ, ಉಲಕತ್ತು – ಈ ಜಗತ್ತಿನಲ್ಲಿ, ಪಿರವಾರೇ – ಹುಟ್ಟುವುದಿಲ್ಲ (ಜನ್ಮರಹಿತರಾಗುವರು).

( ಸ-ಗಾ-ರ ‖ )—

ಅತ್ಯನ್ತದು:ರ್ವಚಮಹಾರ್ತಿಹರಸ್ಯ ವಿಷ್ಣೋ-
ಶ್ಶ್ರೀಶಸ್ಯ ದಿವ್ಯಮಕುಟಸ್ಯ ಹರೇಸ್ಸ್ತವಾಯ |
ಸಾಹಸ್ರಮಾಹ ಶಠಜಿತ್ ಪಠತಾಂ ತದೇತ-
ದ್ದಿವ್ಯಂ ಚ ತತ್ರ ದಶಕಂ ನ ಪುನರ್ಭವಸ್ಸ್ಯಾತ್ ‖

ತಾ‖ ವರ್ಣಿಸಲಶಕ್ಯವಾದ ಸನ್ತಾಪವನ್ನು ನಾಶಪಡಿಸುವ ಉನ್ನತ ಕಿರೀಟಧಾರಿಯಾದ ಸ್ವಾಮಿಯನ್ನು ಕುರಿತು ಶ್ರೀ ಕುರುಕಾಪುರಿಯ ಶಠಾರಿಮುನಿಯು ರಚಿಸಿರುವ ಸಹಸ್ರಪದ್ಯಮಾಲಿಯೊಳು ಈ ದಶಕವನ್ನು ಪಠನಮಾಡಬಲ್ಲವರು (ಈ ಲೋಕದಲ್ಲಿ) ಜನ್ಮರಹಿತರಾಗುವರು.

( ದ್ರ-ಉ-ಸಂ ‖ )—

ಪ್ರೇಮಾಧಿಕೇನ ವಿವಶಸ್ಸುಕುಮಾರಮೂರ್ತೇಃ
ಕ್ಷೇಮಾಯ ಖಿನ್ನಹೃದಯಃ ಪುರುಷೋತ್ತಮಸ್ಯ |
ತದ್ದರ್ಶಿತಾತ್ಮಪರ-ನಿತ್ಯ-ಮುಮುಕ್ಷು ಮುಕ್ತೈಃ
ಕಿಙ್ಕರ್ತ್ವಮಾಹಿತಮನಾಶ್ಶಠಜಿತ್ಕೃತೀಯೇ ‖

( ದ್ರ-ಉ-ತಾ-ರ ‖ )—

ಶ್ರೀಭೂಮೀನಾಯಕತ್ವಾದರಿಸುಕರತಯಾ ಕಲ್ಪಸಿನ್ಧೌ ಶಿಶುತ್ವಾತ್
ಶ್ರೇಸ್ಥಾನೇ ಸನ್ನಿಧಾನಾತ್ ಸುರಹಿತಕರಣಾಚ್ಛ್ರೀನಿವಾಸತ್ವಯೋಗಾತ್ |
ವಿಕ್ರಾನ್ತ್ಯಾ ವಿಷ್ಣುಪಾನಾಂ ವಿಧಿಮುರಧಿಗಮಾತ್ ಸ್ನೇಹ ಸೌಲಭ್ಯಭೂಮ್ನಾ
ಚೈಕಾಕೀ ಸ್ವಾಶ್ರಿತಾನಾಂ ವಿಹರಣಸಮಯೇ ಶ್ರೀಧರಃ ಪ್ರತ್ಯಪಾದಿ ‖

(ಈ ತೃತೀಯದಶಕದ ಸಾರಾಂಶ—)

ಈ ಮೂರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು —ಸುಕುಮಾರಮೂರ್ತಿಯಾದ ಪುರುಷೋತ್ತಮನಲ್ಲಿ ಪ್ರೇಮಾಧಿಕ್ಯದಿಂದ ಮಂಗಳಾಶಾಸನಪರರಾಗಿ, ಶ್ರೀ-ಭೂ-ನೀಳಾನಾಯಕನಾದ ಚಕ್ರಪಾಣಿಯನ್ನು ಕೆಲವರು ಕ್ಷುದ್ರಪುರುಷಾರ್ಥಕ್ಕೂ, ಕೆಲವರು ಆತ್ಮಾನುಭವವೆಂಬ ಕೈವಲ್ಯಕ್ಕೂ ಆಶಿಸಡುತ್ತಾರೆಂದು ಅನುಶೋಚಿಸಿ, ಆವನ ಶಂಖಚಕ್ರಗಳನ್ನು ತಾವು ಹೊತ್ತುಕೊಂಡು ಹಿಂದೆಹೋಗಲು ಆಶಿಸಟ್ಟು, ತಿರುಕ್ಕೋಳೂರಿನಲ್ಲೂ ತಿರುಪ್ಪುಳಿಂಗುಡಿಯಲ್ಲೂ ಶಯನಮಾಡಿರುವ ಸ್ವಾಮಿಗೆ ಮಂಗಳವನ್ನು ಆಶಂಸಿಸಿ, ತಿರುವಣ್ ಪರಿಶಾರದ ಸ್ವಾಮಿಗೆ ಕೈಂಕರ್ಯಮಾಡಲು ಉದ್ದೇಶಿಸಿ, ತ್ರಿವಿಕ್ರಮಾವತಾರದ ಸ್ವಾಮಿಗೆ ಸೇವಾಕೈಂಕರ್ಯವನ್ನು ಪ್ರಾರ್ಥಿಸಿ, ಸರ್ವಶಕ್ತನಾದ ಸ್ವಾಮಿಯನ್ನು ಸ್ತೋತ್ರಮಾಡುವುದಕ್ಕೂ ತಮಗೆ ಶಕ್ತಿಯಿಲ್ಲವೆಂದು ವರ್ಣಿಸಿ ಇರುತ್ತಾರೆ.

---

ಶ್ರೀಃ

## ಅಷ್ಟಮಶತಕದಲ್ಲಿ—ಚತುರ್ಥದಶಕ.

(ವಾರ್‌ಕಡಾವರುವಿಯಾನ್ನೈ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಮಲೈಯಾಳದೇಶದಲ್ಲಿರುವ ತಿರುಚ್ಚೆಙ್ಙನ್ನೂರ್-ಎಂಬ ಶ್ರೀ ರಮ್ಯಾದ್ರೀಶಪುರಿಯಲ್ಲಿ ಬಿಜಯಮಾಡಿರುವ ಭಗವಂತನ ಮಙ್ಗಳಾಶಾಸನವಂ ಮಾಡುತ್ತಾರೆ.)

---

(೧) ವಾರ್‌ಕಡಾವರುವಿಯಾನ್ನೈ ಮಾಮಲೈಯಿನ್
ಮರುಪ್ಪಿಣೈಕ್ಕುವಡಿಉತ್ತುರುಟ್ಟಿ,
ಊರ್‌ಕೊಳ್ ತಿಣ್‌ಪಾಕನುಯಿರ್ ಶೆಕತ್ತರಙ್ಗಿಲ್
ಮಲ್ಲರೈಕ್ಕೊನ್ಱು ಶೂೞ್‌ಪರಣ್‌ಮೇಲ್,
ಪೋರ್‌ಕಡಾವರಶರ್ ಪುಱಕಿಡ ಮಾಡವಿಲಾವಿಕ್ಕೈ
ಕ್ಕಙ್ಜನೈತ್ತುಕರ್‌ತ್ತ,
ಶೀರ್‌ಕೊಳ್ ಶಿಱ್ಱಾಯನ್ ತಿರುಚ್ಚೆಙ್ಙನ್ನೂರಿಲ್
ತಿರುಚ್ಚಿಱ್ಱಾಱಙ್ಗಳ್ ಶೆಲ್‌ಶಾರ್ವೇ.

ಪ್ರ|| ವಾರ್-ಪ್ರವಹಿಸುತ್ತಿರುವ, ಕಡಾ ಅರುವಿ-ಮದೋದಕಧಾರೆಯುಳ್ಳ, ಅನೈ-ಆನೆಯೆಂಬ, ಪೂಮಲೈಯಿಱ್-ಮಹಾಪರ್ವತದ, ಮರುಪ್ಪು-ಕೊಂಬುಗಳೆಂಬ, ಇಣೈಕುವಡು-ಎರಡು ಶಿಖರಗಳನ್ನು, ಇಱುತ್ತು-ಮುರಿದು, ಉರುಟ್ಟಿ - (ಆ ಆನೆಯನ್ನು) ಉರುಳಿಸಿ, ಊರ್‌ಕೊಳ್-ಊರಲ್ಲಿ ನಡೆಸುವುದರಲ್ಲಿ, ತಿಣ್-ಬಲಿಷ್ಠನಾದ, ಪಾಗಱ್-ಮಾವಟಿಗನ, ಉಯಿರ್-ಪ್ರಾಣಗಳನ್ನು, ಶೆಕುತ್ತು-ನಾಶಪಡಿಸಿ, ಅರಙ್ಗಿಲ್-(ಸಭೆಯಲ್ಲಿ) ರಂಗಸ್ಥಲದಲ್ಲಿ ಬಂದ, ಮಲ್ಲರೈ-ಮುಷ್ಟಿಕಾಸುರ ಚಾಣೂರರೆಂಬ ಮಲ್ಲರನ್ನು, ಕೊನ್ಱು-ಕೊಂದು, ಶೂೞ್ ಪರಣ್ ಮೇಲ್-ಸುತ್ತಲೂ ಇರುವ ಉಪ್ಪರಿಗೆಗಳಮೇಲೆ ಇರುವ, ಪೋರ್‌ಕಡಾ - ಯುದ್ಧವಿಶಾರದರಾದ, ಅರಶರ್-ರಾಜರು, ಪುಱಕ್ಕಿಡ-ಹೊರಗೆ ಬಂದು ನೋಡುವಂತೆ, ಮಾಡಮಿಶೈ-ಮಹಡಿಯಮೇಲೆ ಇದ್ದ, ಕಞ್ಜನೈ-ಕಂಸನನ್ನು, ತಕರ್ತ್ತ-ಕೆಡವಿ ಧ್ವಂಸಮಾಡಿದ, ಶೀರ್‌ಕೊಳ್-ವೀರಶ್ರೀ ಸಹಿತನಾದ, ಶಿಱು ಆಯನ್ - ಬಾಲಗೋಪಾಲನಾದ ಕೃಷ್ಣನು ವಾಸಮಾಡುವ, ತಿರುಚ್ಚೆಙ್ಗನ್ಱೂರಿಲ್- ಶ್ರೀರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಱ್ಱಾಱು- ತಿರುಚ್ಚಿಱ್ಱಾಱು ಎಂಬ ನದಿಯು, ಎಙ್ಗಳ್ - ನಮಗೆ, ಶೆಲ್‌ಶಾರ್ವು-ಹೋಗಿ ಆಶ್ರಯಿಸಲು ಅರ್ಹವಾದುದು.

( ಸ-ಗಾ-ರ || )—

ಭಿತ್ವಾ ಮತ್ತದ್ವಿಪಾದ್ರಿ-ದ್ವಿರದನ-ಶಿಖರೌ ಹಸ್ತಿನಂ ತಂ ನಿಪಾತ್ಯ
ಸ್ವೇಚ್ಛಾಸಞ್ಚಾರಕಾರೀ ಗಜಪತಿಹನನಾನ್ಮಲ್ಲಹನ್ತಾ ಚ ಕೃಷ್ಣಃ |
ವೀಥೀಸೌಧೇಷು ರಾಜ್ಞಾಮಪಿ ಸಪದಿ ಬಹಿಃ ಪಶ್ಯತಾಂ ಕಂಸಹನ್ತಾ
ಶ್ರೀರಮ್ಯಾದ್ರೀಶಪುರ್ಯಾಂ ವಸತಿ ಯದುಶಿಶುಸ್ತತ್ರ ಸೇವ್ಯಾ ಸರಿನ್ನಃ ||

ತಾ|| ಮಹಾ ಪರ್ವತದಂತೆ ಇರುವ ಮತ್ತಗಜದ ಕೊಂಬುಗಳನ್ನು ಮುರಿದು, ಆ ಗಜವನ್ನು ಉರುಳಿಸಿ, ಬಲಿಷ್ಠನಾದ ಮಾವಟಿಗನನ್ನು ಕೊಂದು, ಮುಷ್ಟಿಕಾಸುರ ಚಾಣೂರರೆಂಬ ಮಲ್ಲರನ್ನು ಧ್ವಂಸಮಾಡಿ, ಊರಿನವರೆಲ್ಲಾ ಮಹಡಿಗಳಿಂದ ನೋಡುವಂತೆ ಕಂಸನನ್ನು ಮಹಡಿಯಿಂದ ಕೆಡವಿ ಕೊಂದುಹಾಕಿದ ಗೋಪಾಲ ಬಾಲಕನಾದ ಕೃಷ್ಣನು ವಾಸಮಾಡುವ ಶ್ರೀರಮ್ಯಾದ್ರೀಶಪುರಿಯಲ್ಲಿ ತಿರುಚ್ಚಿಱ್ಱಾಱು ಎಂಬ ನದಿಯು ನಮಗೆ ಆಶ್ರಯಣೀಯವಾದುದು.

(೨) ಎಙ್ಗಳ್‌ಶೆಲ್‌ಶಾರ್ವು ಯಾಮುಡ್ಯೆಯಮುದಮಿಮೈಯ–
ವರಪ್ಪನೆನ್ನಪ್ಪನ್,
ಪೊಙ್ಗುಮೂವುಲಕುಮ್ ಪಡ್ಯೆತ್ತಳಿತ್ತಳಿಕ್ಕುಮ್
ಪೊರುನ್ದು ಮೂವುರುವನೆಮ್ಮರುವನ್,
ಶೆಙ್ಕಯಲುಕಳುಮ್ ತೇಮ್ಪಣೈಪುಡ್ಯೆಶೂಳ್
ತಿರುಚ್ಚೆಙ್ಗನ್ನೂರ್ ತಿರುಚ್ಚಿಱ್ಱಾ
ಅಙ್ಗಮರ್‌ಕಿನ್ದ ಆದಿಯಾನಲ್ಲಾಲ್ ಯಾವರ್
ಮಱ್ಱೆನ್ನಮರ್ ತುಣ್ಯೆಯೇ.

ಪ್ರ॥ ಎಙ್ಗಳ್–ನಮಗೆ, ಶೆಲ್‌ಶಾರ್ವು–ಹೋಗಿ ಆಶ್ರಯಿಸಲು ಅರ್ಹವಾದ, ಯಾಮುಡ್ಯೆ–ನಮಗೆ ಲಭ್ಯವಾದ, ಅಮುದಮ್ – (ಭೋಗ್ಯವಾದ) ಅಮೃತದಂತೆ ಇರುವ, ಇಮೈಯವರ್ ಅಪ್ಪನ್–ನಿತ್ಯಸೂರಿಗಳಿಗೆ ಸ್ವಾಮಿಯಾದ, ಪೊಙ್ಗು-ಸಮೃದ್ಧವಾದ, ಮೂವುಲಕುಮ್–ಮೂರುಲೋಕಗಳನ್ನು, ಪಡ್ಯೆತ್ತು–ಸೃಷ್ಟಿಸಿ, ಅಳಿತ್ತು–ರಕ್ಷಿಸಿ, ಅೞಿಕ್ಕುಮ್ – ಸಂಹರಿಸುವವನಾದ, ಪೊರುನ್ದು–ಅದಕ್ಕೆ ತಕ್ಕ, ಮೂವುರುವನ್–ತ್ರಿಮೂರ್ತಿರೂಪವುಳ್ಳವನಾದ, ಎಮ್-ನಮ್ಮ, ಅರುವನ್–ಅನ್ತರಾತ್ಮನಾದ, ಶೆಮ್ ಕಯಲ್ ಉಕಳುಮ್–ಕೆಂಪಾದ ಮೀನುಗಳು ಹಾರಿ ಆಡುತ್ತಿರುವ, ತೇಮ್ ಪಣೈ–ಮಧುಭರಿತವಾದ ಸಸ್ಯಕ್ಷೇತ್ರಗಳಿಂದ, ಪುಡ್ಯೆ–ಪರಿವೃತವಾಗಿ ಇರುವ, ತಿರುಚ್ಚೆಙ್ಗನ್ನೂರ್–ಶ್ರೀರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಱ್ಱಾಱು–ಈ ಲಘುಸರಿತ್ ಎಂಬ ನದಿಯ, ಅಙ್ಗು–ಸಮೀಪದಲ್ಲಿ, ಅಮರ್‌ಕಿನ್ದ–ಆದರದಿಂದ ವಾಸಮಾಡುವ, ಆದಿಯಾನ್ – ಮೂಲಕಾರಣಭೂತನಾದ ಸ್ವಾಮಿಯು, ಅಲ್ಲಾಲ್–ಅಲ್ಲದಿದ್ದರೆ, ಮಱ್ಱು-ಬೇರೆ, ಎನ್ ಅಮರ್‌ತುಣ್ಯೆ–ನನಗೆ ತಕ್ಕ ಸಹಾಯಕರು, ಯಾವರ್–ಯಾರು?

( ಸ–ಗಾ–ರ ॥ )—

ಅಸ್ಮಾಕಂ ಸೇವ್ಯಭೋಗ್ಯಾಮೃತಸಿಧಿಂಪಿ ಮೇ ನಾಯಕಶ್ಚ ತ್ರಿಲೋಕೀ–
ಸೃಷ್ಟಿ–ಸ್ಥಿತ್ಯಪ್ಯಯಾರ್ಥಂ ತ್ರಿವಿಧತನುರಸಾವನ್ತರಾತ್ಮಾ ಸದಾ ನಃ ।
ಸೂರೀನ್ದ್ರಸ್ಸಸ್ಯಪೂರ್ಣೇ ನಿವಸತಿ ಹಿ ಹರಿಸ್ತತ್ರ ಶಿಱ್ಱಾಱ್‌ಸಮೀಪೇ
ಶ್ರೀರಮ್ಯಾದ್ರೀಶಪುರ್ಯಾಂ! ನ ಹಿ ಶರಣಮಹೋ! ತಂ ವಿನಾಽಸ್ಮಾಕಮನ್ಯೇ॥

ತಾ|| ನಮಗೆ ಆಶ್ರಯಾರ್ಹನಾಗಿಯೂ, ಭೋಗ್ಯಾಮೃತಪ್ರಾಯನಾಗಿಯೂ, ನಿತ್ಯಸೂರೀಶ್ವರನಾಗಿಯೂ, ತ್ರಿಲೋಕಗಳ ಸೃಷ್ಟಿಸ್ಥಿತಿ ಲಯಗಳಿಗಾಗಿ ತ್ರಿಮೂರ್ತಿ ರೂಪಿಯಾಗಿಯೂ, ನಮ್ಮ ಅನ್ತರಾತ್ಮನಾಗಿಯೂ ಇರುವ, ದಿವ್ಯಕ್ಷೇತ್ರಭರಿತವಾದ ಶ್ರೀರಮ್ಯಾದ್ರೀಶಪುರಿಯಲ್ಲಿ ಶ್ರೀಲಘುಸರಿತ್-ಎಂಬ ನದಿಯ ಸಮೀಪದಲ್ಲಿ ವಾಸಮಾಡುವ ಆದಿಕಾರಣವಸ್ತುವಾದ ಸ್ವಾಮಿಯನ್ನು ಹೊರತು ಬೇರೆ ಯಾರು ನಮಗೆ ತಕ್ಕ ಸಹಾಯಕರು ? (ಯಾರೂ ಇಲ್ಲವೆಂದು ಭಾವವು.)

(೩) ಎನ್ನಮರ್‌ಪೆರುಮಾನಿಮೈಯವರ್
ಪೆರುಮಾನಿರುನಿಲಮಿಡನ್ದವೆಮ್‌ ಪೆರುಮಾನ್,
ಮುನ್ನೈವಲ್‌ವಿನೈಕಳ್‌ ಮುಳುದುಡನ್‌ಮಾಳ
ವೆನ್ನೈಯಾಳ್‌ಕೊಣ್ಡ ವೆಮ್‌ಪೆರುಮಾನ್,
ತೆನ್ದಿಶೈಕ್ಕಣಿಕೊಳ್‌ ತಿರುಚ್ಚೆಙ್ಗನ್ನೂರಿಲ್‌
ತಿರುಚ್ಚಿಱ್ಱಾಱ್ಱಙ್ಕರೈಮೀಪಾಲ್‌,
ನಿನ್ದವೆಮ್‌ಪೆರುಮಾನ್ ಅಡಿಯಲ್ಲಾಲ್‌ ಶರಣ್‌
ನಿನೈಪ್ಪಿಲುಮ್‌ ಪಿಱಿದಿಲ್ಲೈಯೆನಕ್ಕೇ.

ಪ್ರ|| ಇಮೈಯವರ್ – ನಿತ್ಯಸೂರಿಗಳಿಗೆ, ಪೆರುಮಾನ್–ಸ್ವಾಮಿಯಾದ, ಎನ್ ಅಮರ್‌ಪೆರುಮಾನ್- ನನಗೆ ಅನುರೂಪನಾದ ಸ್ವಾಮಿಯಾದ, ಇರುನಿಲಮ್–ಮಹಾ ಭೂಮಿಯನ್ನು, ಇಡನ್ದ–ಕಿತ್ತು ಎತ್ತಿದ, ಎಮ್ಪೆರುಮಾನ್ – ನನ್ನ ನಾಥನಾದ, ಮುನ್ನೈ-ಅನಾದಿಯಾದ, ವಲ್-ಪ್ರಬಲವಾದ, ವಿನೈಕಳ್-ಪಾಪಗಳು, ಮುಳುದು-ಎಲ್ಲಾ, ಉಡನ್–ಏಕಕಾಲದಲ್ಲಿ, ಮಾಳ–ನಾಶಹೊಂದುವಂತೆ, ಎನ್ನೈ–ನನ್ನನ್ನು, ಆಳ್‌ಕೊಣ್ಡ–ದಾಸನಾಗಿ ಮಾಡಿಕೊಂಡಿರುವ, ಎಮ್‌ಪೆರುಮಾನ್-ನಮ್ಮ ಸ್ವಾಮಿಯಾದ, ತೆನ್‌ದಿಶೈಕ್ಕು–ದಕ್ಷಿಣದಿಕ್ಕಿಗೆ, ಅಣಿಕೊಳ್–ಅಲಂಕಾರವಾದ, ತಿರುಚ್ಚೆಙ್ಗನ್ನೂರಿಲ್– ಶ್ರೀರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಱ್ಱಾಱ್ಱಙ್ಕರೈ-ಲಘುನದೀತೀರದಲ್ಲಿ, ಮೀಪಾಲ್– ಪಶ್ಚಿಮದಿಕ್ಕಿನಲ್ಲಿ, ನಿನ್ದ–ನಿಂತಿರುವ, ಎಮ್‌ಪೆರುಮಾನ್–ನಮ್ಮ ಸ್ವಾಮಿಯ, ಅಡಿ ಅಲ್ಲಾಲ್-ಪಾದಗಳಲ್ಲದೆ, ಎನಕ್ಕು-ನನಗೆ, ನಿನೈಪ್ಪಿಲುಮ್-ಮನಸ್ಸಿನಲ್ಲೂ, ಪಿಱಿದು ಶರಣ್ ಇಲ್ಲೈ–ಬೇರೆ ರಕ್ಷಕವಸ್ತುವು ಇಲ್ಲ.

( ಸ-ಗಾ-ರ ॥ )—

ಸೂರೀಣಾಂ ನಾಯಕೋಽಸೌ ಮಮ ಚ ವಿಭುರಹೋ!
ಭೂಮಿಮುದ್ಧೃತ್ಯ ನಾಥೋ
ಮೇ ಸರ್ವಾನಾದಿಪಾಪಾವಳಿಶಮನಕರಶ್ಶೋಭಿರೂಪೋ ಮಮೇಶಃ ।
ಶ್ರೀರಮ್ಯಾದ್ರೀಶಪುರ್ಯಾಂ ವಸತಿ ಶುಭಸರಿತ್ಪಶ್ಚಿಮೇಽಸೌ ಹಿ ಭಾಗೇ
ತತ್ಪಾದಾಬ್ಜದ್ವಯಂ ಮೇ ಶರಣಮಿಹ ಪರಂ! ನಾನ್ಯದಿತ್ಯೇವ ಮನ್ಯೇ ॥

ತಾ॥ ನಿತ್ಯಸೂರೀಶ್ವರನಾಗಿಯೂ, ನನಗೆ ಅನುರೂಪನಾದ ಸ್ವಾಮಿಯಾಗಿಯೂ, ಭೂಮಿಯನ್ನು ಉದ್ಧರಿಸಿದ ಸ್ವಾಮಿಯಾಗಿಯೂ, ಅನಾದಿ ಪಾಪನಾಶಕನಾಗಿ ನನ್ನನ್ನು ಆಳುವ ಸ್ವಾಮಿಯಾಗಿಯೂ, ದಕ್ಷಿಣದಿಕ್ಕಿಗೆ ಅಲಂಕಾರಪ್ರಾಯವಾದ ತಿರುಚ್ಚಿಟ್ರುನ್ಗೂರಿನಲ್ಲಿ ತಿರುಚ್ಚಿಟ್ರಾಱು—ಎಂಬ ನದೀತೀರದಲ್ಲಿ ಪಶ್ಚಿಮದಿಕ್ಕಿನಲ್ಲಿ ನಿಂತಿರುವ ನಮ್ಮ ಸ್ವಾಮಿಯ ಪಾದಗಳನ್ನು ಹೊರತು ಬೇರೆ ಯಾವುದೂ ನನಗೆ ಮನಸ್ಸಿನಲ್ಲೂ ರಕ್ಷಕವಸ್ತುವಾಗಿ ಇಲ್ಲ.

(೪) ಪಿಱಿದಿಲ್ಲೈ ಯೆನಕ್ಕು ಪ್ಪೆರಿಯಮೂವುಲಕುಮ್ ನಿಱೈಯ
ಪ್ಪೇರುರುವಮಾಯ್ ನಿಮಿರ್ನ್ದ
ಕುಱಿಯ ಮಾಣೆಮ್ಮಾನ್ ಕುರೈಕಡಲ್ ಕಡೈನ್ದ
ಕೋಲಮಾಣಿಕ್ಕಮೆನ್ನಮ್ಮಾನ್,
ಶೆಱಿಕುಲೈ ವಾೞೈ ಕಮುಕಂ ತೆಙ್ಗಣಿಶೂೞ್
ತಿರುಚ್ಚೆಙ್ಗುನ್ಗೂರ್ ತಿರುಚ್ಚಿಟ್ರಾ-
ಱಱಿಯ, ಮೆಯ್ಯೆಮ್ಮೈಯೋ ನಿನ್ಱ
ವೆಮ್ಬೆರುಮಾನಡಿಯಿಣೈ ಯಲ್ಲದೋರರಣೇ.

ಪ್ರ॥ ಪೆರಿಯಮೂವುಲಕುಮ್ - ವಿಶಾಲವಾದ ಮೂರು ಲೋಕಗಳೂ, ನಿಱೈಯ—ಪೂರ್ಣವಾಗುವಂತೆ, ಪೇರ್ ಉರುವಮ್ ಆಯ್—ಮಹಾರೂಪವುಳ್ಳವನಾಗಿ, ನಿಮಿರ್ನ್ದ – ಬೆಳೆದ, ಕುಱಿಯಮಾಣ್ – ವಾಮನ ಬ್ರಹ್ಮಚಾರಿಯಾದ, ಎಮ್ಮಾನ್—ನನ್ನ ಸ್ವಾಮಿಯಾದ, ಕುರೈಕಡಲ್—ಘೋಷಿಸುತ್ತಿರುವ ಸಮುದ್ರವನ್ನು, ಕಡೈನ್ದ—ಕಡೆದ, ಕೋಲ—ರಮಣೀಯವಾದ, ಮಾಣಿಕ್ಕಮ್-ಮಾಣಿಕ್ಯವರ್ಣನಾದ, ಎನ್ನಮ್ಮಾನ್ – ನನ್ನ ಸ್ವಾಮಿಯಾದ, ಶೆಱಿಕುಲೈ—ನಿಬಿಡವಾದ (ಹಣ್ಣಿನ) ಗೊನೆಯುಳ್ಳ, ವಾೞೈ-ಬಾಳೆಯೂ, ಕಮುಕು—ಅಡಿಕೆಯೂ, ತೆಙ್ಗು—ತೆಂಗೂ, ಅಣಿಶೂೞ್-

ಸಾಲುಗಳಾಗಿ ಅಲಂಕಾರವಾಗಿ ಸುತ್ತಲೂ ಇರುವ, ತಿರುಚ್ಚೆಙ್ಙನೂರ್-ಶ್ರೀರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿತ್ತಾತ್ತಾನು - ಶ್ರೀ ಲಘುನದೀತೀರದಲ್ಲಿರುವವರು, ಅತ್ತಿಯ-ತಿಳಿಯುವಂತೆ, ಮೆಯ್ಮ್ಮೈಯೇ-ಸತ್ಯವಾಗಿಯೇ, ನಿನ್ನ-ನಿಂತಿರುವ, ಎಮ್ ಪೆರುಮಾನ್ - ನಮ್ಮ ಸ್ವಾಮಿಯ, ಅಡಿಯಿಣೈ-ಪಾದಯುಗಳವು, ಅಲ್ಲದು-ಅಲ್ಲದೆ, ಪಿಱಿದು-ಬೇರೆ, ಎನಕ್ಕು-ನನಗೆ, ಓರ್ ಅರಣ್ ಇಲ್ಲೈ-ಒಂದುರಕ್ಷಕ ವಸ್ತುವಿಲ್ಲ.

( ಸ-ಗಾ-ರ ॥ )—

ತ್ರೈಲೋಕ್ಯವ್ಯಾಪಿದಿವ್ಯಸ್ವತನುರಯಮುಕೋ! ವಾಮನೋ ಬ್ರಹ್ಮಚಾರೀ
ಮನ್ಥಾಯೋಽವ್ಭೋಧಿಸಿನ್ಧೋಃ ಮಣಿರಿಥ ಇಹ ಭಾತ್ಯೇವ
ಶ್ರೀತಾಮ್ರಪರ್ ತಟೇಽಸೌ ।
ಶ್ರೀರಮ್ಯಾದ್ರೀಶಪುರ್ಯಾಂ ಕ್ರಮುಕ-ಕದಳೀ-ನಾರಿಕೇಳಾದಿರಮ್ಯೇ
ದೇಶೇಽಸ್ಯಾಂಘ್ರಿದ್ವಯಂ ಮೇ ಶರಣಮಿಹ ಹರೇರ್ನಾನ್ಯದಿತ್ಯೇವ ಸತ್ಯಮ್॥

ತಾ॥ ಮೂರುಲೋಕಗಳನ್ನೂ ವ್ಯಾಪಿಸುವಂತೆ ಮಹಾರೂಪವುಳ್ಳವನಾಗಿ ಬೆಳೆದ ವಾಮನಬ್ರಹ್ಮಚಾರಿಯಾಗಿಯೂ, ಸಮುದ್ರವನ್ನು ಕಡೆದ ಮಾಣಿಕ್ಯವರ್ಣನಾದ ಸ್ವಾಮಿಯಾಗಿಯೂ, ನಿಬಿಡವಾಗಿ ಫಲಿಸಿರುವ ಬಾಳೆ-ಅಡಿಕೆ-ತೆಂಗು ಮುಂತಾದ ವೃಕ್ಷಗಳಿಂದ ಪರಿವೃತವಾದ ಶ್ರೀರಮ್ಯಾದ್ರೀಶಪುರಿಯಲ್ಲಿ ಶ್ರೀ ಲಘುನದೀತೀರದಲ್ಲಿ ಸರ್ವರಿಗೂ ದೃಶ್ಯನಾಗಿ ನಿಂತಿರುವ ನಮ್ಮ ಸ್ವಾಮಿಯ ಪಾದಯುಗಳವಲ್ಲದೆ ಬೇರೆ ನನಗೆ ರಕ್ಷಕವಸ್ತುವೇ ಇಲ್ಲ.

(೫) ಅಲ್ಲದೋರರಣುಮವನಿಲ್ ವೇಱಿಲ್ಲೈ
ಯದುಪೊರುಳಾಕಿಲುಮ್, ಅವನೈ
ಯಲ್ಲದೆನ್ನಾವಿಯಮರ್‌ನ್ದಣೈಕಿಲ್ಲಾ ದಾದಲಾಲವನುಱೈಕಿನ್ಱ
ನಲ್ಲ ನಾನ್ಮಱೈಯೋರ್ ವೇಳ್ವಿಯುಳ್ ಮಡುತ್ತ
ನೆಱುಪ್ಪೊಕ್ಕಿ ವಿಸುಮ್ಬೊಳಿಮಱೈಕ್ಕು
ನಲ್ಲ ನೀಳ್‌ಮಾಡ ತ್ತಿರುಚ್ಚೆಙ್ಙನೂರಿಲ್
ತಿರುಚ್ಚಿತ್ತಾತಾನಕ್ಕು ನಲ್ಲರಣೇ.

ಪ್ರ॥ ಅಲ್ಲದು-ಬೇರೆ, ಓರ್ ಅರಣುಮ್-ಯಾವ ಶರಣ್ಯವಾದ ಸ್ಥಲವೂ, ಅವನಿಲ್-ಅವನಿಗಿಂತ, ವೇಱು ಇಲ್ಲೈ-ಬೇರೆ ಯಾರೂ ಇಲ್ಲ. ಅದು-ಅದೇ, ಪೊರುಳ್ ಆಕಿಲುಮ್-ಸತ್ಯವಾದ ಸ್ಥಿತಿಯಾಗಿದ್ದರೂ, ಅವನೈ ಅಲ್ಲದು-ಆ ರಮ್ಯಾದ್ರೀಶಪುರೀಶ್ವರನನ್ನು ಬಿಟ್ಟು, ಎನ್ ಆವಿ - ನನ್ನ ಆತ್ಮವಸ್ತುವು, ಅಮರ್‌ನ್ದು-

ಸ್ವಾಸ್ಥ್ಯವನ್ನು ಹೊಂದಿ, ಅಣ್ಯೆಕಿಲನ್ದ್ರು-ಇರಲಾರದು. ಆದಲಾಲ್-ಆದುದರಿಂದ, ಅರ್ವ ಉತ್ರೈಕಿನ್ರ-ಅವನು ನಿತ್ಯವಾಸವಮಾಡುವ, ನಲ್ಲ-ವಿಲಕ್ಷಣರಾದ, ನಾನ್ಮತ್ತಾ ಯೋರ್-ನಾಲ್ಕು ವೇದಗಳನ್ನು ತಿಳಿದವರು, ವೇಳ್ವಿಯುಳ್-ಯಾಗಗಳಲ್ಲಿ, ಮಡುತ್ತ-ಅಗ್ನಿಮುಖದಲ್ಲಿ ಸಮರ್ಪಿಸಿದ, ನಱುಪುಕೈ-ಸುಗನ್ಧಧೂಪವು, ವಿಶುಮ್ಬು-ಆಕಾಶ ದಲ್ಲಿ, ಒಳಿ-ಸೂರ್ಯಾದಿ ತೇಜೋದ್ರವ್ಯಗಳನ್ನು, ಮಱೈಕ್ಕುವ್-ಮರೆಸುವ ನಲ್ಲ-ವಿಲಕ್ಷಣವಾದ, ನೀಳ್-ಉನ್ನತವಾದ, ಮಾಡ-ಉಪ್ಪರಿಗೆಗಳುಳ್ಳ, ತಿರುಚ್ಚೆಙ್ಗುನ್ರೂರಿಲ್-ಶ್ರೀ ರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಱ್ಱಾಱು – ಶ್ರೀಲಘುನದಿಯು, ಎನಕ್ಕುನಲ್ ಅರಣೇ-ನನಗೆ ಒಳ್ಳೇ ರಕ್ಷಕವಸ್ತುವು.

( ಸ-ಗಾ-ರ ॥ )—

ನಾನ್ಯನ್ಮೇ ಭಾತಿ ಸತ್ಯಂ ಶರಣಮಿಹ ತತೋ! ಭಾತಿ ತತ್ತ್ವಂ ತದೇವ
ಸ್ವಾನ್ತಂ ಮೇ ಭಾತಿ ಚಾತ್ಮಾ ಸತತಮಪಿ ಹರೌ ತತ್ರ ನಾನ್ಯತ್ರ ಸತ್ಯಮ್ ।
ಶ್ರೀರಮ್ಯಾದ್ರೀಶಪುರ್ಯಾಂ ನಿವಸತಿ ಹಿ ಸ ಯತ್ರಾಗ್ನಿಹೋಮೋ ವೃಣೋತ್ಯೇ-
ವಾಕಾಶೇ ಸೌಧಮಾಲಾಂ! ಸರಿದಿಹ ಶರಣಂ ಸಾ ಮಮಾಭೀತಿಹೇತುಃ॥

ತಾ॥ ಆ ದಿವ್ಯಸ್ಥಲಕ್ಕಿಂತ ಬೇರೆ ಯಾವುದೂ ಶರಣವಲ್ಲ; ಅವನಿಗಿಂತ ಬೇರೆ ಯಾರೂ ಶರಣ್ಯರಲ್ಲ. ಅದೇ ಸತ್ಯವಾಗಿದ್ದರೂ, ಆ ಭಗವನ್ತನನ್ನು ಬಿಟ್ಟು ನನ್ನ ಆತ್ಮವಸ್ತುವು ಸ್ವಾಸ್ಥ್ಯವನ್ನು ಹೊಂದಿ ಇರಲಾರದು. ಆದುದರಿಂದ ಅವನು ನಿತ್ಯವಾಸಮಾಡುವ ಸ್ಥಲವಾಗಿಯೂ ಚತುರ್ವೇದಿಗಳಿಂದ ಸಮರ್ಪಿಸಲ್ಪಟ್ಟ ಸುಗನ್ಧಧೂಪವು ಆಕಾಶದಲ್ಲಿರುವ ಸೂರ್ಯಚನ್ದ್ರಾದಿ ತೇಜೋದ್ರವ್ಯಗಳನ್ನು ಮರೆಸುವಂತಹ ಉನ್ನತವಾದ ಉಪ್ಪರಿಗೆಗಳುಳ್ಳದುದಾಗಿಯೂ ಇರುವ ಶ್ರೀ ರಮ್ಯಾದ್ರೀಶಪುರಿಯಲ್ಲಿ ಶ್ರೀ ಲಘುನದಿಯು ನನಗೆ ಒಳ್ಳೇ ರಕ್ಷಕವಸ್ತುವು.

(೬) ಎನಕ್ಕುನಲ್ಲರಣ್ಯೆಯೆನದಾರುಯಿರ್ಕ್ಕೆಯಿಮ್ಮೆಯುಮವರ್
ತನ್ದೈತಾಯ್‌ತನ್ನೈ,
ತನಕ್ಕುಮವ್‌ತಕ್‌ತನ್ಮೈಯಱಿವರಿಯಾನೈತ್ತಡಙ್ಕಡಲ್
ಪಳ್ಳಿಯಮ್ಮಾನೈ, ವಾಳ್
ಮನಕ್ಕೊಳ್‌ಶೀರ್‌ಮೂವಾಯಿರವರ್
ವಣ್‌ಶಿವನುಮಯುನುಮ್‌ ತಾನುಮೊಪ್ಪಾರ್‌
ಕನಕ್ಕೊಳ್‌ತಿಣ್‌ಮಾಡತ್ತಿರುಚ್ಚೆಙ್ಗುನ್ರೂರಿಲ್
ತಿರುಚ್ಚಿಱ್ಱಾಱದನುಳ್‌ಕ್ಕಣ್ಡೇನೇ.

ಪ್ರ॥ ಎನಕ್ಕು-ನನಗೆ, ನಲ್ ಅರಣ್ಣೈ-ಒಳ್ಳೇ ಆಶ್ರಯವಾಗಿರುವವನನ್ನು, ಎನದು ಆರುಯಿರೈ - ನನ್ನ ಶ್ಲಾಘ್ಯವಾದ ಪ್ರಾಣಸದೃಶನನ್ನು, ಇಮೈಯವರ್-ನಿತ್ಯಸೂರಿಗಳಿಗೆ, ತನ್ದೈತಾಯ್ ತನ್ನೈ-ತಂದೆಯಾಗಿಯೂ ತಾಯಿಯಾಗಿಯೂ ಇರುವವನನ್ನು, ತನಕ್ಕುಮ್-ಸರ್ವಜ್ಞನಾದ ತನಗೂ, ತನ್ ತನ್ಮೈ-ತನ್ನ ಮಹಿಮೆಯನ್ನು, ಅಱಿವು ಅರಿಯಾನ್ನೈ-ತಿಳಿಯಲು ಅಶಕ್ಯವಾಗಿರುವಂಥವನನ್ನು, ತಡಮ್ ಕಡಲ್-ವಿಸ್ತೀರ್ಣವಾದ ಸಮುದ್ರದಲ್ಲಿ, ಪಳ್ಳಿ-ಶಯನಮಾಡುವ, ಅಮ್ಮಾನ್ನೈ-ಸ್ವಾಮಿಯನ್ನು, ಮನಮ್‌ಕೊಳ್-ಮನಸ್ಸಿನಲ್ಲಿ ಧ್ಯಾನಮಾಡಲ್ಪಟ್ಟ, ಶೀರ್-ಭಗವದ್ಗುಣಗಳುಳ್ಳ, ಮೂವಾಯಿರವರ್-ಮೂರುಸಾವಿರಮಂದಿಯಾದ, ವಣ್-ಜ್ಞಾನಾದಿ ಸಮ್ಪತ್ತುಳ್ಳ, ಶಿವನುಮ್-ರುದ್ರನೂ, ಅಯನುಮ್-ಬ್ರಹ್ಮನೂ, ತಾನುಮ್-(ವಿಷ್ಣುವಾದ) ತಾನೂ, ಒಪ್ಪಾರ್-ಮುಂತಾದ ತಮಗೆ ಸಮಾನರಾಗಿರುವವರು, ವಾೞ್-ವಾಸಮಾಡುವ, ಕನಮ್‌ಕೊಳ್-ಮಹಾಮಹಿಮೆಯುಳ್ಳ, ತಿಣ್‌ಮಾಡ-ದೃಢವಾದ ಪ್ರಾಸಾದಗಳುಳ್ಳ, ತಿರುಚ್ಚೆಙ್ಗುನ್ಱೂರಿಲ್-ಶ್ರೀ ರಮ್ಯಾದ್ರೀಶಪುರಿಯಲ್ಲಿ ತಿರುಚ್ಚಿಱ್ಱಾಱದನುಳ್-ಶ್ರೀಲಘು ನದೀತೀರದಲ್ಲಿ, ಕಣ್ಡೇನ್-ಕಂಡೆನು.

( ಸ-ಗಾ-ರ ॥ )—

ಮನ್ನಾಥಂ ಮೇ ಶರಣ್ಯಂ ಪಿತರಮಪಿ ಪರಂ ಮಾತರಂ ಸೂರಿಗೋಷ್ಠ್ಯಾಃ-
ಶ್ರೀಶಂ ಸ್ವಸ್ಯಾಪ್ಯವೇದ್ಯಂ ಶಯಿತಮಪಿ ವಿಶಾಲಾಮ್ಬುಧೌ ಶ್ರೀಹರಿಂ ತಮ್।
ದೇವಾನಾಂ ಸಾಮ್ಯಮಾಪ್ತಾ ವಸತಿಮುಪಗತಾ ಯತ್ರ ಸೌಧಾಶ್ರಿತಾಯಾಂ
ಶ್ರೀರಮ್ಯಾದ್ರೀಶಪುರ್ಯಾಂ ಸರಿದುಪರಿತಲೇಽದ್ರಾಕ್ಷವಿಹಾಶಂ ತಮೇನಮ್ ॥

ತಾ॥ ನನಗೆ ಒಳ್ಳೇ ಶರಣ್ಯನಾಗಿಯೂ, ನನಗೆ ಪ್ರಿಯಪ್ರಾಣ ಸದೃಶನಾಗಿಯೂ, ನಿತ್ಯಸೂರಿಗಳಿಗೆ ತಂದೆಯಾಗಿಯೂ ತಾಯಿಯಾಗಿಯೂ, ಸರ್ವಜ್ಞನಾದ ತನಗೂ ಅಚಿನ್ತ್ಯವಾದ ಮಹಿಮೆಯುಳ್ಳವನಾಗಿಯೂ, ಸಮುದ್ರಶಾಯಿಯಾಗಿಯೂ ಇರುವ ಸ್ವಾಮಿಯನ್ನು — ನಾನು ಭಗವದ್ಗುಣಾನುಸನ್ಧಾನಪರರಾದ ಬ್ರಹ್ಮರುದ್ರಾದಿ ಸದೃಶರಾದ ಮೂರುಸಾವಿರಮಂದಿ ಮಹನೀಯರು ವಾಸಮಾಡುವ ದೃಢಪ್ರಾಸಾದ ಪರಿವೃತವಾದ ಶ್ರೀ ರಮ್ಯಾದ್ರೀಶಪುರಿಯಲ್ಲಿ ಶ್ರೀ ಲಘುನದೀತೀರದಲ್ಲಿ ಕಂಡೆನು.

(೭) ತಿರುಚ್ಚೆಬ್ಬ್ಯನ್ನೂರಿಲ್ ತಿರುಚ್ಚಿಱ್ಱಾಱದನುಳ್ ಕಣ್ಡ
ವತ್ತಿರುವಡಿಯೆನ್ನುಮ್,
ತಿರುಚ್ಚೆಯ್ಯ ಕಮಲಕ್ಕಣ್ಣುಮ್ ಶೆವ್ವಾಯುಮ್
ಶೆವ್ವಡಿಯುಮ್ ಶೆಯ್ಯಕೈಯುಮ್,
ತಿರುಚ್ಚೆಯ್ಯ ಕಮಲವುನ್ದಿಯುಮ್ ಶೆಯ್ಯ
ಕಮಲೈಮಾರ್ಬುಮ್ ಶೆಯ್ಯ ವುಡೈಯುಮ್,
ತಿರುಚ್ಚೆಯ್ಯ ಮುಡಿಯುಮಾರಮುಮ್ ಪಡೈಯುಮ್
ತಿಕೞವೆನ್ ಶಿನ್ದೈಯುಳಾನೇ.

ಪ್ರ॥ ತಿರುಚ್ಚೆಬ್ಬ್ಯನ್ನೂರಿಲ್ – ಶ್ರೀ ರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಱ್ಱಾ ಱದನುಳ್–ಶ್ರೀ ಲಘುನದೀತೀರದಲ್ಲಿ, ಕಣ್ಡ – ನಾನು ಕಂಡ, ಅತ್ತಿರುವಡಿ–ಆ ಸ್ವಾಮಿಯು, ಶೆಯ್ಯಕಮಲ–ಅವನ ಕೆಂದಾವರೆಯಂತೆ ಇರುವ, ತಿರುಕ್ಕಣ್ಣುಮ್–ನೇತ್ರಗಳೂ, ಶೆವ್ವಾಯುಮ್–ಬಿಂಬಾಧರವೂ, ಶೆವ್ವಡಿಯುಮ್–ರಮ್ಯವಾದ ಪಾದ ಗಳೂ, ಶೆಯ್ಯಕೈಯುಮ್–ರಮ್ಯವಾದ (ಕೆಂಪಾದ) ಹಸ್ತಗಳೂ, ಶೆಯ್ಯಕಮಲ– ಕೆಂದಾವರೆಯಂತೆ ಇರುವ, ತಿರು ಉನ್ದಿಯುಮ್–ನಾಭಿಯೂ, ಶೆಯ್ಯಕಮಲೈ– ಪದ್ಮವಾಸಿನಿಯಾದ ಲಕ್ಷ್ಮಿಯುಳ್ಳ, ಮಾರ್ಬುಮ್–ವಕ್ಷಸ್ಸ್ಥಲವೂ, ಶೆಯ್ಯ ಉಡೈ ಯುಮ್–(ಕೆಂಪಾದ) ರಮಣೀಯವಾದ ವಸ್ತ್ರವೂ, ಶೆಯ್ಯ ತಿರುಮುಡಿಯುಮ್– ರಮ್ಯವಾದ ಕಿರೀಟವೂ, ಆರಮುಮ್–ಹಾರವೂ, ಪಡೈಯುಮ್–ದಿವ್ಯಾಯುಧ ಗಳೂ, ತಿಕೞ–ಚೆನ್ನಾಗಿ ಪ್ರಕಾಶಿಸುವಂತೆ, ಎನ್ನುಮ್–ಎಂದಿಗೂ, ಎನ್ ಶಿನ್ದೈಯುಳ್– ನನ್ನ ಮನಸ್ಸಿನಲ್ಲಿ, ಉಳಾನ್–ಇರುತ್ತಾನೆ.

( ಸ–ಗಾ–ರ ॥ )—

ಶ್ರೀರಮ್ಯಾದ್ರೀಶಪುರ್ಯಾಂ ಲಘುಸರಿದುಪಕಣ್ಠಾಶ್ರಯಶ್ಶ್ರೀಹರಿರ್ಮೇ
ಚಿತ್ತೇ ನಿತ್ಯಂ ಚಕಾಸ್ತಿ ಸ್ವಯಮಹಹ! ಸರೋಜಾಕ್ಷಿ–ಬಿಮ್ಬಾಧರಾದ್ಯೈಃ ।
ಪದ್ಭ್ಯಾಂ ಹಸ್ತೈಶ್ಚ ಪದ್ಮೈರರುಣಮುಕುಟಭೃನ್ನಾಭಿಪದ್ಮಶ್ಚ ಪದ್ಮಾಂ
ಧೃತ್ವಾ ವಕ್ಷಸ್ಯಸೌ ಶ್ರೀಕಟಿವಸನಧರೋ ಹಾರದಿವ್ಯಾಯುಧಾದ್ಯೈಃ ॥

ತಾ॥ ಶ್ರೀ ರಮ್ಯಾದ್ರೀಶಪುರಿಯಲ್ಲಿ ಶ್ರೀ ಲಘುನದೀತೀರದಲ್ಲಿ ನಾನು ಕಂಡ ಆ ಸ್ವಾಮಿಯು ಎಂದಿಗೂ ನನ್ನ ಮನಸ್ಸಿನಲ್ಲಿ—ಅವನ ರಮ್ಯವಾದ ನೇತ್ರಾಧರ– ಪಾದ–ಹಸ್ತ–ನಾಭಿ–ಶ್ರೀವತ್ಸವಕ್ಷಸ್ಸ್ಥಲ–ವಸ್ತ್ರ–ಕಿರೀಟ– ಹಾರ – ದಿವ್ಯಾಯುಧ ಗಳೆಲ್ಲಾ ಚೆನ್ನಾಗಿ ಪ್ರಕಾಶಿಸುವಂತೆ—ವಾಸಮಾಡುತ್ತಿದಾನೆ.

(೮) ತಿಕಳ್‍ವೆನ್ ಶಿನ್ದೈಯುಳಿರುನ್ದಾನೈ ಚ್ಚೆೞುನಿಲತ್ತೇವರ್
ನಾನ್ಮಱೈಯೋರ್,
ತಿಶೈಕೈಕೂಪ್ಪಿ ಯೇತ್ತುಮ್ ತಿರುಚ್ಚೆಙ್ಗುನ್ಱೂರಿಲ್
ತಿರುಚ್ಚಿಱ್ಱಾಱ್ಱಙ್ಗರೈಯಾನೈ,
ಪುಕರ್‍ಕೊಳ್ ವಾನವರ್‍ಕಳ್ ಪುಕಲಿಡನ್ದನ್ನೈ
ಯಶುರರ್ ವನ್‍ಕೈಯರ್ ವೆಙ್ಗೂಱ್ಱೈ,
ಪುಕೞುಮಾಱಱಿಯೇನ್ ಪೊರುನ್ದು ಮೂವುಲಕಮ್
ಪಡೈಪ್ಪೊಡು ಕೆಡುಪ್ಪುಕಾಪ್ಪವನೇ.

ಪ್ರ॥ ತಿಕೞ-ಪ್ರಕಾಶಿಸುವಂತೆ, ಎನ್ ಶಿನ್ದೈಯುಳ್ - ನನ್ನ ಮನಸ್ಸಿನಲ್ಲಿ, ಇರುನ್ದಾನೈ-ಇದ್ದವನನ್ನು, ಶೆೞು-ವಿಲಕ್ಷಣರಾದ, ನಿಲತ್ತೇವರ್-ಭೂಸುರರಾದ (ಬ್ರಾಹ್ಮಣರಾದ), ನಾನ್ಮಱೈಯೋರ್-ಚತುರ್ವೇದಿಗಳು, ತಿಶೈ-ದಿಕ್ಕುಗಳಲ್ಲೆಲ್ಲಾ, ಕೈ ಕೂಪ್ಪಿ-ಅಂಜಲಿಮಾಡಿ, ಏತ್ತುಮ್-ಸ್ತೋತ್ರಮಾಡುವ, ತಿರುಚ್ಚೆಙ್ಗುನ್ಱೂರಿಲ್-ಶ್ರೀರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಱ್ಱಾಱ್ಱಙ್ಗರೈಯಾನೈ-ಶ್ರೀ ಲಘುನದೀತೀರ ವಾಸಿಯಾದ ಸ್ವಾಮಿಯನ್ನು, ಪುಕರ್‍ಕೊಳ್-ಪ್ರಕಾಶಮಾನರಾದ, ವಾನವರ್‍ಕಳ್-ದೇವತೆಗಳಿಗೆ, ಪುಕಲಿಡಮ್ ತನ್ನೈ-ಆಶ್ರಯಣೀಯನಾದವನನ್ನು, ವನ್‍ಕೈಯರ್-ಪ್ರಬಲರಾದ, ಅಶುರರ್-ಅಸುರರಿಗೆ, ವೆಮ್‍ಕೂಱ್ಱೈ-ಕ್ರೂರ ಯಮನಂತೆ ಇರುವವನನ್ನು, ಪೊರುನ್ದು - ತನ್ನೊಡನೆ ಹೊಂದಿಕೊಂಡಿರುವ, ಮೂವುಲಕಮ್-ಮೂರುಲೋಕಗಳ, ಪಡೈಪ್ಪೊಡು-ಸೃಷ್ಟಿಯೊಡನೆ, ಕೆಡುಪ್ಪು ಕಾಪ್ಪವನ್-ಸಂಹಾರ ರಕ್ಷಣಗಳುಳ್ಳವನನ್ನು, ಪುಕೞುಮ್ ಆಱು-ಸ್ತೋತ್ರಮಾಡುವ ಪ್ರಕಾರವನ್ನು, ಅಱಿಯೇನ್-ತಿಳಿಯೆನು.

( ಸ-ಗಾ-ರ ॥ )—

ಮಚ್ಚಿತ್ತೇ ಭಾಸ್ವರಂ ತಂ ಮಹಿತಗುಣ-ಚತುರ್ವೇದಿ-ಭೂದೇವವನ್ದ್ಯಂ
ಶ್ರೀರಮ್ಯಾದ್ರೀಶಪುರ್ಯಾಂ ಲಘುಸರಿದುಪಕಣ್ಠಾಶ್ರಯಂ ದೇವದೇವಮ್ ।
ವೀರಾಣಾಂ ಚಾಸುರಾಣಾಂ ಪ್ರಮಥನಕರಮೇವಾನ್ತಕಂ ಸ್ತೋತುಮೇನಂ
ಲೋಕಾನಾಂ ಸೃಷ್ಟಿ-ರಕ್ಷಾ-ಪ್ರಳಯಕರಮಹೋ! ನೈವ ರೀತಿಂ ಹಿ ವೇದ್ಮಿ॥

ತಾ॥ ನನ್ನ ಮನಸ್ಸಿನಲ್ಲಿ ಪ್ರಕಾಶಮಾನನಾಗಿಯೂ, ವಿಲಕ್ಷಣ ಬ್ರಾಹ್ಮಣರಾದ ಚತುರ್ವೇದಿಗಳಿಂದ ಸರ್ವದಿಕ್ಕುಗಳಲ್ಲೂ ಅಂಜಲಿಮಾಡಿ ಸ್ತುತಿಸಲ್ಪಡುವ

ಶ್ರೀ ರಮ್ಯಾದ್ರೀಶಪುರಿಯಲ್ಲಿ ಶ್ರೀ ಲಘೂನದೀತೀರದಲ್ಲಿ ವಾಸಮಾಡುವವನಾಗಿಯೂ, ಪ್ರಕಾಶಮಾನರಾದ ದೇವತೆಗಳಿಗೆ ಆಶ್ರಯಣೀಯನಾಗಿಯೂ, ಪ್ರಬಲರಾದ ಅಸುರರಿಗೆ ಕ್ರೂರ ಯಮಸದೃಶನಾಗಿಯೂ, ತ್ರೈಲೋಕ್ಯ ಸೃಷ್ಟಿ–ಸ್ಥಿತಿ–ಸಂಹಾರ ಕರ್ತನಾಗಿಯೂ—ಇರುವ ಸ್ವಾಮಿಯನ್ನು ಸ್ತೋತ್ರಮಾಡುವ ರೀತಿಯನ್ನು ನಾನು ಅರಿಯೆನು.

(೯) ಪಡೈತ್ತೊಡು ಕೆಡುತ್ತುಕ್ಕಾಕ್ಕುಮ್ ಪಿರಮಪರಮ್ಬರನ್
ಶಿವಪ್ಪಿರಾನವನೇ,
ಇಡೈಪ್ಪುಕ್ಕೋರುರುವುಮೊೞಿವಿಲ್ಲಾ ಯವನೇ
ಪುಕಳ್ವಿಲ್ಲೈ ಯಾವೈಯುಮ್ ತಾನೇ,
ಕೊಡೈಪ್ಪೆರುಮ್ಪುಕೞಾರಿನ್ನೈಯರ್ ತನ್ನಾನಾರ್
ಕೂರಿಯ ವಿಚ್ಚೈಯೋಡೊೞುಕ್ಕಮ್,
ನಡೈಪ್ಪಲಿಯಿಯಱ್ಕೈ ತ್ತಿರುಚ್ಚೆಙ್ಗುನ್ನೂರಿಲ್
ತಿರುಚ್ಚಿಟ್ರಾಱಮರ್ನ್ದ ನಾದನೇ.

ಪ್ರ॥ ಕೊಡೈ–ಔದಾರ್ಯದಿಂದ, ಪೆರುಮ್ ಪುಕೞಾರ್–ಮಹಾಕೀರ್ತಿಯುಳ್ಳವರು, ಇನ್ನೈಯರ್–ಇಂಥವರೆಂದು ಪ್ರಸಿದ್ಧರಾದ (ಎನ್ನೈಯರ್–ಎಂದು ಪಾಠಾನ್ತರದಲ್ಲಿ=ಅನೇಕರಾದ), ತನ್ನಾನಾರ್–ತಾನೇ ಎಂಬಂತೆ ಜ್ಞಾನಾನುಷ್ಠಾನಸಂಪನ್ನರಾದವರ, ಕೂರಿಯ–ಸೂಕ್ಷ್ಮವಾದ, ವಿಚ್ಚೈಯೋಡು – ವಿದ್ಯೆಯೊಡನೆಕೂಡಿದ, ಒೞುಕ್ಕಮ್–ಅನುಷ್ಠಾನವನ್ನೂ, ನಡೈ–ನಿತ್ಯವಾಗಿ ಸಲ್ಲುವ, ಪಲಿ (ಬಲಿ)–ಭಗವದಾರಾಧನವನ್ನೂ, ಇಯಱ್ಕೈ–ಸ್ವಭಾವವಾಗಿ ಉಳ್ಳ, ತಿರುಚ್ಚೆಙ್ಗುನ್ನೂರಿಲ್–ಶ್ರೀ ರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಟ್ರಾಱು–ಶ್ರೀ ಲಘೂನದೀತೀರದಲ್ಲಿ, ಅಮರ್ನ್ದ–ಪ್ರೀತಿಯೊಡನೆ ನಿಂತಿರುವ, ನಾದನೇ–ಸ್ವಾಮಿಯಾದವನೇ, ಪಡೈತ್ತೊಡು ಕೆಡುತ್ತುಕ್ಕಾಕ್ಕುಮ್–ಲೋಕಗಳ ಸೃಷ್ಟಿ ಸಂಹಾರ ರಕ್ಷಣಗಳನ್ನು ಮಾಡುವವನು. ಪಿರಮಪರಮ್ಬರನ್ – ಬ್ರಹ್ಮನೆಂಬ ಉತ್ಕೃಷ್ಟಮೂರ್ತಿಯೂ, ಶಿವಪ್ಪಿರಾನ್ – ರುದ್ರನೂ, ಅವನೇ–ತಾನೇ ಆಗಿನಿಂತವನಾಗಿ, ಇಡೈ–ಇವರಿಬ್ಬರಿಗೂ ನಡುವೆ, ಪುಕ್ಕು–(ರಕ್ಷಕನಾಗಿ) ಪ್ರವೇಶಿಸಿ, ಓರ್ ಉರುವುಮ್–ಒಂದು ಪದಾರ್ಥವನ್ನೂ, ಒೞಿವಿಲ್ಲೈ–ಬಿಡದೆ ಇರುವಂಥವನಾಗಿ, ಅವನೇ – ಇರುವವನೇ, ಯಾವೈಯುಮ್ – ಎಲ್ಲಾ ವಸ್ತುಗಳೂ, ತಾನೇ – ತಾನೇ ಆಗಿರುವವನು. ಪುಕೞುವಿಲ್ಲೈ – ಇದು ಬರೀ ಸ್ತುತಿಯಲ್ಲ.

( ಸ–ಗಾ–ರ ॥ )—

ಔದಾರ್ಯೋದಾತ್ತಕೀರ್ತೇ! ಸಕಲವಿಧಮಹಾಜ್ಞಾನವೃತ್ತಾದಿನಿಷ್ಠ್ಯೈ-
ಶ್ಶ್ರೀರಮ್ಯಾದ್ರೀಶಪುರ್ಯಾಂ ಲಘುಸರಿದುಪಕಣ್ಠಾಶ್ರಯೋಽಸೀಹ ಪೂಜ್ಯಃ।
ಸೃಷ್ಟಿ-ಸ್ಥಿತ್ಯಪ್ಯಯಾನಾಮಧಿಪತಯ ಇಮೇ ಧಾತೃ-ರುದ್ರಾದಯಸ್ತ್ವಂ
ರಕ್ಷಾದೀಕ್ಷಾಂ ದಧಾಸಿ! ಸ್ವಯಮಖಿಲಜಗದ್ರೂಪ ಏವಾಸಿ! ಸತ್ಯಮ್ ॥

ತಾ॥ ಔದಾರ್ಯದಿಂದ ಮಹಾಕೀರ್ತಿಯುಳ್ಳ, ಸಕಲವಿಧ ಜ್ಞಾನಾನುಷ್ಠಾನ ಸಮ್ಪನ್ನರಿಂದ ನಿತ್ಯಪೂಜ್ಯನಾದ ಶ್ರೀರಮ್ಯಾದ್ರೀಶಪುರಿಯಲ್ಲಿ ಶ್ರೀ ಲಘುನದೀತೀರ ವಾಸಿಯಾದ ಸ್ವಾಮಿಯೇ ಸೃಷ್ಟಿಸ್ಥಿತಿಲಯಕರ್ತನಾಗಿ ಬ್ರಹ್ಮರುದ್ರರನಡುವೆ ರಕ್ಷಕ ನಾಗಿ ನಿಂತು ಸಕಲವಸ್ತುಗಳಲ್ಲೂ ತಾನೇ ಅನ್ತಃಪ್ರವಿಷ್ಟನಾಗಿದಾನೆ. ಇದು ಕೇವಲ ಪ್ರಶಂಸಾಪರವಲ್ಲ—ಸತ್ಯವಾದ ಮಾತು.

(೧೦) ಅಮರ್‌ನ್ದ ನಾದನೈ ಯವರವರಾಕಿಯವರ್‌ಕ್ಕರುಳ–
ರುಳುಮವ್ಮಾನೈ,
ಅಮರ್‌ನ್ದ ತಣ್‌ಪೂನ ತ್ತಿರುಚ್ಚೆಙ್ಙ್ಯಾೞಿಲ್
ತಿರುಚ್ಚಿಱ್ಱಾಱ್ಱಙ್ಕರೈಯಾನೈ,
ಅಮರ್‌ನ್ದ ಶೀರ್ ಮೂವಾಯಿರವರ್ ವೇದಿಯರ್‌ಕಳ್
ತಮ್‌ಪತಿ ಯವನಿತೇವರ್‌ವಾೞ್ವು,
ಅಮರ್‌ನ್ದ ಮಾಯೋನೈ ಮುಕ್ಕಣಮ್ಮಾನೈ ನಾನ್ಮುಕನೈ
ಯಮರ್‌ನ್ದೇನೇ.

ಪ್ರ॥ ಅಮರ್‌ನ್ದ – ತಕ್ಕ, ನಾದನೈ – ಸ್ವಾಮಿತ್ವವುಳ್ಳವನನ್ನು, ಮುಕ್ಕಣ್ ಅಮ್ಮಾನೈ-ತ್ರಿಲೋಚನನಾದ ರುದ್ರರೂಪಿಯನ್ನೂ, ನಾನ್ಮುಕನೈ-ಚತುರ್ಮುಖನಾದ ಬ್ರಹ್ಮರೂಪಿಯನ್ನೂ, ಅವರವರ್ ಆಕಿ–ಅವರವರೇ ಎಂಬಂತೆ ಆಗಿ, ಅವರ್‌ಕ್ಕು– ಅವರಿಗೆ, ಅರುಳ್-ಅಭೀಷ್ಟಾರ್ಥವನ್ನು, ಅರುಳುಮ್-ಅನುಗ್ರಹಿಸುವ, ಅಮ್ಮಾನೈ– ಸ್ವಾಮಿಯನ್ನು, ಅಮರ್‌ನ್ದ–ಸೇರಿಕೊಂಡಿರುವ, ತಣ್‌ಪೂನಮ್ – ಶೀತಲವಾದ ಕ್ಷೇತ್ರಗಳುಳ್ಳ, ತಿರುಚ್ಚೆಙ್ಙ್ಯಾೞಿಲ್-ಶ್ರೀರಮ್ಯಾದ್ರೀಶಪುರಿಯಲ್ಲಿ, ತಿರುಚ್ಚಿಱ್ಱಾಱ್ಱಙ್ಕರೈಯಾನೈ-ಶ್ರೀ ಲಘುನದೀತೀರವಾಸಿಯನ್ನು, ಅಮರ್‌ನ್ದ-ಹೊಂದಿಕೊಂಡಿರುವ, ಶೀರ್–ಕಲ್ಯಾಣಗುಣಗಳುಳ್ಳ, ಮೂವಾಯಿರವರ್- ಮೂರುಸಾವಿರಮಂದಿ, ವೇದಿಯರ್‌ಕಳ್–ವೈದಿಕರಿಗೆ, ತಮ್‌ಪತಿ–ಅಸಾಧಾರಣದೇಶವಾದ, ಅವನಿದೇವರ್–

ಭೂಸುರರಾದ ಭಾಗವತರ, ವಾಳ್ವು – ಉಜ್ಜೀವನಸಾಧನವಾದ ಸ್ಥಲವನ್ನು, ಆಮರ್‌ನ್ದ – ಆಳಿಪಟ್ಟ, ಮಾಯೋನ್ನೈ ಆಶ್ಚರ್ಯಭೂತನನ್ನು, ಅಮರ್‌ನ್ದೇನೇ – ಆಶ್ರಯಿಸಿದೆನು.

( ಸ–ಗಾ–ರ || )—

ನಾಥಂ ಸರ್ವೇಪ್ಸಿತಾರ್ಥಪ್ರದಮಖಿಲಸುರಾನ್ ರುದ್ರಧಾತ್ರಪ್ರಮುಖ್ಯಾನ್
ರಕ್ಷನ್ತಂ ತ್ರೈಸ್ಸಹಸ್ರತ್ರಿತಯನಿಗಮವಿದಗ್ರ್ಯಭೂಸುರೈರಾಶ್ರಿತಾಯಾಮ್ |
ಶ್ರೀರಮ್ಯಾದ್ರೀಶಪುರ್ಯಾಂ ಲಘುಸರಿದುಪಕಣ್ಠೇಽತ್ರ ನಿತ್ಯಂ ಲಸನ್ತಂ
ಮಾಯಾಚೇಷ್ಟಂ ಶ್ರಿತೋಽಹಂ ಪ್ರಥಮುದಿತಮಹಾಸಸ್ಯಕೇದಾರದೇಶೇ||

ತಾ|| ಉಚಿತವಾದ ಸ್ವಾಮಿತ್ವವುಳ್ಳವನಾಗಿಯೂ, ಬ್ರಹ್ಮರುದ್ರಾದ್ಯನ್ತರ್ಯಾಮಿಯಾಗಿಯೂ, ಅವರಿಗೆ ವರಪ್ರದನಾಗಿಯೂ, ಸಸ್ಯಕ್ಷೇತ್ರಭರಿತವಾದ ಶ್ರೀ ರಮ್ಯಾದ್ರೀಶಪುರಿಯಲ್ಲಿ ಶ್ರೀ ಲಘುನದೀತೀರದಲ್ಲಿ ವಾಸಮಾಡುವವನಾಗಿಯೂ, ಮೂರು ಸಾವಿರಮಂದಿ ವೈದಿಕಶಿಖಾಮಣಿಗಳಾದ ಭೂಸುರರಿಗೆ ಉಜ್ಜೀವನಸ್ಥಲವಾದ ಆ ದಿವ್ಯದೇಶವನ್ನು ಆಳಿಪಟ್ಟಿರುವ ಆಶ್ಚರ್ಯಚೇಷ್ಟಿತನಾಗಿಯೂ ಇರುವ ನನ್ನ ಸ್ವಾಮಿಯನ್ನು ಆಶ್ರಯಿಸಿದೆನು.

(೧೧) ತೇನ್ನೈ ನಱುಪಾಲೈ ಕ್ಕನ್ನಲೈ ಯಮುದೈ
ತ್ತಿರುನ್ದುಲಕುಣ್ಡವಮ್ಮಾನ್ನೈ,
ವಾನನಾನ್ಮಕನ್ನೈ ಮಲರ್‌ನ್ದ ತಣ್‌ಕೊಪ್ಪೂಳ್
ಮಲರ್‌ಮಿಶೈ ಪ್ಪಡೈತ್ತ ಮಾಯೋನ್ನೈ,
ಕೋನ್ನೈ ವಣ್‌ಕುರುಕೂರ್ ವಣ್‌ಶಡಕೋಪನ್
ಶೊನ್ನ ವಾಯಿರತ್ತುಳಿಪ್ಪತ್ತುಮ್,
ವಾನಿಱ್ಮಿಣ್ದೇತ್ತಿಯರುಳ್‌ಶೆಯ್ದು ಮುಡಿಕ್ಕುಮ್
ಪಿಱವಿ ಮಾಮಾಯಕ್ಕೂತ್ತಿನ್ನೈಯೇ.

ಪ್ರ|| ತೇನ್ನೈ–ಜೇನುತುಪ್ಪದಂತೆ ಮಧುರತಮನಾಗಿಯೂ, ನಱುಪಾಲೈ–ಒಳ್ಳೇ ಹಾಲಿನಂತೆ ಸ್ವಾಭಾವಿಕ ರಸವಿಶಿಷ್ಟನಾಗಿಯೂ, ಕನ್ನಲೈ – ಗಿಣ್ಣುಗಿಣ್ಣಿಗೂ ರಸಾಧಿಕ್ಯವುಳ್ಳ ಕಬ್ಬಿನಂತೆ ಭೋಗ್ಯತಮನಾಗಿಯೂ, ಅಮುದೈ–ಸನ್ತಪ್ತರನ್ನು ಉಜ್ಜೀವಿಸುವಂತೆ ಮಾಡುವ ಅಮೃತದಂತೆ ಸಂಜೀವನ ರೂಪಿಯಾಗಿಯೂ, ತಿರುನ್ದು ಉಲಕು ಉಣ್ಡ–ವಿಲಕ್ಷಣವಾದ ಲೋಕಗಳನ್ನು (ಪ್ರಳಯದಲ್ಲಿ) ಭಕ್ಷಿಸಿದ,

ಅಮ್ಮಾನೈ-ಸ್ವಾಮಿಯನ್ನು, ವಾನ-ಊರ್ಧ್ವಲೋಕವಾಸಿಯಾದ, ನಾನ್ಮುಕನೈ-ಚತುರ್ಮುಖನನ್ನು, ಮಲರ್ನ್ದ-ವಿಕಸಿತವಾದ, ತಣ್-ಶೀತಳವಾದ, ಕೊಪ್ಪೂಮ್ ಮಲರ್ಮಿಸೈ-ನಾಭಿಕಮಲದಲ್ಲಿ, ಪಡೈತ್ತ-ಸೃಷ್ಟಿಸಿದ, ಮಾಯೋನೈ-ಮಾಯಾಚೇಷ್ಟಿತನನ್ನು, ಕೋನೈ-ಸರ್ವರಿಗೂ ಸ್ವಾಮಿಯಾದವನನ್ನು, ವಣ್‌ಕುರುಕೂರ್-ಸಮೃದ್ಧಿಶಿಷ್ಟವಾದ ಶ್ರೀ ಕುರುಕಾಪುರಿಯ, ವಣ್‌ಶಡಕೋಪನ್-ಉದಾರಸ್ವಭಾವವುಳ್ಳ ಶ್ರೀ ಶಠಾರಿಮುನಿಯು, ಶೊನ್ನ-ಸ್ತೋತ್ರಮಾಡಲು ರಚಿಸಿದ, ಆಯಿರತ್ತುಳ್-ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್ – ಈ ದಶಕವು, ವಾನಿವಿಾದು – ಪರಮಪದದಲ್ಲಿ, ಏತ್ತಿ-ಹೆತ್ತಿಸಿ, ಅರುಳ್‌ಶೆಯ್ದು – ಕೈಙ್ಕರ್ಯ ಸಾಮ್ರಾಜ್ಯವೆಂಬ ಭಗವದಙ್ಗೀಕಾರವನ್ನು ಉಂಟುಮಾಡಿ, ಪಿಱವಿ-ಸಂಸಾರವೆಂಬ, ಮಾಮಾಯಕ್ಕೂತ್ತಿನೈಯೇ – ಮಹಾ ಮಾಯಾನಾಟಕವನ್ನು, ಮುಡಿಕ್ಕುಮ್ – ಮುಗಿಸಿ ನಾಶಪಡಿಸುವುದು.

( ಸ-ಗಾ-ರ || )—

ನಾಥಂ ಹೃದ್ಯಂ ಚ ದುಗ್ಧಂ ಮಧುರಸಮಮೃತಂ ಚೇಕ್ಷುಕಾಣ್ಡಂ ಚ ಲೋಕಾನ್
ಭಕ್ಷಿತ್ವಾ ಚ ಸ್ವನಾಭಿಸ್ಥಲ-ಸರಸಿಜತಸ್ತಂ ವಿರಿಞ್ಚಂ ಚ ಸೃಷ್ಟ್ವಾ |
ಮಾಯಾಚೇಷ್ಟಂ ಪ್ರಭುಂ ತಂ ಸುಮಹಿತಕುರುಕಾಪತ್ತನೇಶಶ್ಶಠಾರಿ-
ಸ್ತ್ರೋತುಂ ಸಾಹಸ್ರಮಾಹ ಸ್ವಯಮಿಹ ದಶಕಂ ಮೋಕ್ಷದಂ ಬನ್ಧನಾಶಾತ್ ||

ತಾ|| ಮಧು – ಕ್ಷೀರ – ಇಕ್ಷು – ಅಮೃತಪ್ರಾಯನಾಗಿಯೂ, ಸಕಲಲೋಕಭಕ್ಷಕನಾದ ಸ್ವಾಮಿಯಾಗಿಯೂ, ಚತುರ್ಮುಖನನ್ನು ತನ್ನ ನಾಭಿಕಮಲದಿಂದ ಸೃಷ್ಟಿಸಿದ ಮಾಯಾಚೇಷ್ಟಿತನಾಗಿಯೂ ಇರುವ ಸರ್ವೇಶ್ವರನನ್ನು ಶ್ರೀ ಕುರುಕಾಪುರಿಯ ಶಠಾರಿಮುನಿಯು ಸ್ತುತಿಸಲು ರಚಿಸಿದ ಸಹಸ್ರ ಪದ್ಯಮಾಲೆಯೊಳು ಈ ದಶಕವು ಪರಮಪದದಲ್ಲಿ ಶ್ರೀ ಭಗವತ್ಕೈಂಕರ್ಯ ಸಾಮ್ರಾಜ್ಯವನ್ನು ಉಂಟುಮಾಡಿ ಸಂಸಾರವೆಂಬ ಮಹಾ ಮಾಯಾನಾಟಕವನ್ನು ಧ್ವಂಸಮಾಡಿ ಚೇತನೋಜ್ಜೀವನಕರವಾಗುವುದು.

( ದ್ರ-ಉ-ಸಂ || ) —

ಕ್ಷೇಮಂ ಸ್ವಶೌರ್ಯಮಧಿಕಂ ವಿಮತೈರಧೃಷ್ಯಂ
ಗ್ರಾಮಂ ಚ ಕಂ ಚನ ನಿಜಾವಸಥಾಯಮಾನಮ್ |
ತತ್ರ ದ್ವಿಜಾನರಿಜಿತಸ್ಸ್ವಸಮಾನ್ ಪ್ರದರ್ಶ್ಯ
ನಿರ್ಭೀರಕಾರಿ ನಿತರಾಂ ಸ ಮುನಿಶ್ಶತುರ್ಥೇ ||

( ದ್ರ–ಉ–ತಾ–ರ ॥ )—
ದ.ದರ್ಾನ್ತೇಭೇನ್ದ್ರಭಜ್ಞಾಚ್ಛಭನಿಲಯತಯಾ ಸಾಮ್ಯತಶ್ಶ್ಚೇತರೇಷಾಂ
ಸ್ವಾಯತ್ತತ್ವೇನ ಭಾನಾಚ್ಛ್ರತಹೃದಿಸತತಂ ದೇವತದ್ದ್ವೇಷಿಭಜ್ಞೇ ।
ಮಿತ್ರಾಮಿತ್ರತ್ವಯೋಗಾಜ್ಜಗದುದಯಕೃತೇರ್ದೇವತಾತ್ಮತ್ವಮುಖ್ಯೈ-
ಶ್ಶ್ರೀಮಾನ್ ವೈಕುಣ್ಠನಾಥಶ್ಶ್ರಿತವಿಹಿತಸಮಗ್ರತ್ವಭೂಮಾಽನ್ವಭಾವಿ ॥

(ಈ ಚತುರ್ಥದಶಕದ ಸಾರಾಂಶ—)

ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀರವ್ಯಾದ್ರೀಶಪುರಿಯಲ್ಲಿ ಶ್ರೀ ಲಘುನದೀತೀರದಲ್ಲಿ ವಾಸಮಾಡುತ್ತಿರುವ ಸರ್ವೇಶ್ವರನನ್ನು ಮಙ್ಗಳಾಶಾಸನ ಮಾಡಲು ಉದ್ಯುಕ್ತರಾಗಿ, ಕಂಸಧ್ವಂಸಿಯಾದ ಕೃಷ್ಣಾವತಾರ ರೂಪಿಯಾಗಿಯೂ, ಸೃಷ್ಟಿ ಸ್ಥಿತಿ ಲಯಕರ್ತನಾದ ಆದಿಕಾರಣ ವಸ್ತುವಾಗಿಯೂ, ವರಾಹರೂಪಿಯಾಗಿ ಭೂಮಣ್ಡಲೋದ್ಧಾರ ಮಾಡಿದವನಾಗಿಯೂ, ತ್ರಿವಿಕ್ರಮನಾಗಿ ತ್ರಿಲೋಕಗಳನ್ನೂ ಆಳಿದವನಾಗಿಯೂ, ಸಮುದ್ರಮಥನ ಮಾಡಿದವನಾಗಿಯೂ ಇರುವ ಸ್ವಾಮಿಯೇ ಅಲ್ಲಿ ನಿಂತಿರುವುದಾಗಿ ಭಾವಿಸಿ, ಅವನಿಗಿಂತ ಬೇರೆ ರಕ್ಷಕರಿಲ್ಲವೆಂದು ನಿರ್ಣಯಿಸಿ, ಅವನ ನೇತ್ರಾಧರ–ಪಾದ–ಹಸ್ತ–ನಾಭಿ-ಶ್ರೀವತ್ಸ–ವಸ್ತ್ರ–ಕಿರೀಟ–ಹಾರ–ದಿವ್ಯಾಯುಧಗಳನ್ನೆಲ್ಲಾ ಸ್ಮರಿಸಿ, ಸ್ತುತಿಸಿ, ಮೂರುಸಾವಿರಮಂದಿ ಭೂಸುರೋತ್ತಮರಿಂದ ಸೇವ್ಯವಾದ ಆ ದಿವ್ಯದೇಶವನ್ನೇ ಆಶ್ರಯಿಸಲು ನಿಶ್ಚಯಿಸಿ (ಈ ದಶಕದಿಂದ ಬನ್ಧಮೋಕ್ಷವಾಗುವುದೆಂದು ನಿಷ್ಕರ್ಷಿಸಿ)-ಕೃತಾರ್ಥರಾಗಿರುತ್ತಾರೆ.



# ಶ್ರೀಃ
# ಅಷ್ಟಮಶತಕದಲ್ಲಿ—ಪಞ್ಚಮದಶಕ
## (ಮಾಯಕ್ಕೂತ್ತಾ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನನ್ನು ಸಾಕ್ಷಾತ್ಕರಿಸಬೇಕೆಂಬ ಆಶೆಯುಳ್ಳವರಾಗಿ ಆಕ್ರನ್ದನಮಾಡುತ್ತಾರೆ.)

---

(೧) ಮಾಯಕ್ಕೂತ್ತಾ! ವಾಮನಾ! ವಿನೈಯೇನ್
ಕಣ್ಣಾ! ಕಣ್‌ಕೈಕಾಲ್,
ತೂಯಶೆಯ್ಯಮಲರ್‌ಕಳಾ ಶೋದಿಚ್ಚೆವ್ವಾಯ್ ಮುಕಿಳದಾ,
ಶಾಯಲ್ ಶಾಮತ್ತಿರುಮೇನಿ ತಣ್‌ಪಾಶಡೈಯಾ ತಾಮರೈನೀಳ್,
ವಾಶತ್ತಡಮ್‌ಪೋಲ್ ವರುವಾನೇ ಯೊರುನಾಳ್
ಕಾಣವಾರಾಯೇ.

ಪ್ರ॥ ಮಾಯಕ್ಕೂತ್ತಾ– ಆಶ್ಚರ್ಯಕರವಾದ ಲೀಲೆಗಳುಳ್ಳವನೇ, ವಾಮನಾ– ವಾಮನರೂಪಿಯಾದವನೇ, ವಿನ್ನೈಯೇಂಕಣ್ಣಾ–ಪಾಪಿಯಾದ ನನಗೋಸ್ಕರ ಅವತರಿಸಿದ ಕೃಷ್ಣನೇ, ಕಣ್‌ಕೈಕಾಲ್– ಕಣ್ಣು ಕೈಕಾಲುಗಳು, ತೂಯ – ಪರಿಶುದ್ಧವಾದ, ಶೆಯ್ಯಮಲರ್‌ಕಳ್ ಆ– ಕೆಂಪಾದ ವಿಕಸಿತ ಪುಷ್ಪಗಳಾಗಿಯೂ, ಶೋದಿ– ತೇಜಸ್ಸುಳ್ಳ, ಶೆವ್ವಾಯ್-ಬಿಂಬಾಧರವು, ಮುಕ್ಕಿಳದಾ-ಮೊಗ್ಗಾಗಿಯೂ, ಶಾಯಲ್– ಪ್ರಕಾಶಮಾನವಾದ, ಶಾಮ – ಶ್ಯಾಮಳವಾದ, ತಿರುಮೇನಿ – ಶರೀರವು, ತಣ್– ಶೀತಳವಾದ, ಪಾಶು ಅಡೈ ಆ – ಹಚ್ಚಗೆ ಇರುವ ಎಲೆಯಾಗಿಯೂ, ತಾಮರೈ– ತಾವರೆಹೂವುಗಳುಳ್ಳ, ನೀಳ್ – ವಿಶಾಲವಾದ, ವಾಶ – ಪರಿಮಳಭರಿತವಾದ, ತಡಮ್‌ಪೋಲ್–ತಟಾಕವು ನಡೆದುಬರುವಂತೆ, ವರುವಾನೇ–ಬರುವವನೇ, ಒರುನಾಳ್ – ಒಂದುದಿನ, ಕಾಣ – ನಾನು ಕಾಣುವಂತೆ, ವಾರಾಯೇ – ನೀನು ಬರಬೇಕು.

( ಸ-ಗಾ–ರ ॥ )—

ಮಾಯಾವಿಚೇಷ್ಟಿತ! ಹರೇ! ಮಮ ವಾಮನ! ಶ್ರೀ-
ಕೃಷ್ಣ! ತ್ವದಕ್ಷಿ–ಕರ–ಪಾದ–ಸರೋಜಬೃನ್ದೈಃ ।
ರಕ್ತಾಧರೇಣ ತನುಪಲ್ಲವತಶ್ಚ ಭಾಸಿ
ತ್ವಂ ಜಙ್ಗಮಃ ಕಿಲ ತಟಾಕ ಇಹ್ಯೇಹಿ ಜಾತು ॥

ತಾ॥ ಮಾಯಾಚೇಷ್ಟಿತನಾದ ವಾಮನನೇ! ಪಾಪಿಯಾದ ನನಗೋಸ್ಕರ ಅವತರಿಸಿದ ಕೃಷ್ಣನೇ! ನಿನ್ನ ಕಣ್ಣು ಕೈ ಕಾಲುಗಳು ಕೆಂಪಾದ ತಾವರೇಹೂವುಗಳಂತೆಯೂ, ನಿನ್ನ ಬಿಂಬಾಧರವು ತಾವರೆಮೊಗ್ಗಿನಂತೆಯೂ, ನಿನ್ನ ಶ್ಯಾಮಳವಾದ ಶರೀರವು ಹಚ್ಚಗೆ ಇರುವ ಎಲೆಯಂತೆಯೂ ಇರುವುದರಿಂದ ನೀನು ನಡೆದು ಬಂದರೆ ತಾವರೆಪುಷ್ಪಗಳಿಂದ ಭರಿತವಾದ ತಟಾಕವು ನಡೆದುಬರುವಂತೆ ತೋರುವುದು. ನಾನು ಕಾಣುವಂತೆ ಒಂದುದಿನ ನೀನು ನಡೆದುಬರಬೇಕು.

(೨) ಕಾಣವಾರಾಯೆನ್ಱು ಕಣ್ಣುಮ್ ವಾಯುಮ್
ತುವರ್‌ನ್ದು, ಅಡಿಯೇನ್
ನಾಣಿ ನನ್ನಾಟ್ಟಲಮನ್ನಾಲಿರಙ್ಗಿ ಯೊರುನಾಳ್
ನೀಯುನ್ದೋ,
ಕಾಣವಾರಾಯ್ ಕರುನಾಯಿಱುದಿಕ್ಕುಮ್
ಕರುಮಾಮೋಣಿಕ್ಕ
ನಾಳ್ ನಲ್ ಮಲೈಪೋಲ್, ಶುಡರ್‌ಚ್ಚೋದಿ
ಮುಡಿಶೇರ್ ಶೆನ್ನಿಯಮ್ಮಾನೇ.

ಪ॥ ಕರುನಾಯಿಱು–ಕಪ್ಪುಬಣ್ಣವುಳ್ಳ ಆದಿತ್ಯನು, ಉದಿಕ್ಕುಮ್–ಉದಯಿಸುವಂತೆ, ಮಾ–ಮಹಾಶ್ಲಾಘ್ಯವಾದ, ಕರುಮಾಣಿಕ್ಕ–ನೀಲಮಾಣಿಕ್ಯರೂಪಿಯಾಗಿ ನಾಳ್–ಅಭಿನವ ಸೌನ್ದರ್ಯವುಳ್ಳ, ನಲ್‌ಮಲೈಪೋಲ್–ರಮ್ಯವಾದ ಪರ್ವತದಂತೆ, ಶುಡರ್–ಪ್ರಕಾಶಮಾನವಾದ, ಶೋದಿ–ತೇಜಸ್ಸುಳ್ಳ, ಮುಡಿ–ಕೇಶಪಾಶದೊಡನೆ, ಶೇರ್–ಸೇರಿದ, ಶೆನ್ನಿ–ಶಿರಸ್ಸುಳ್ಳ, ಅಮ್ಮಾನೇ–ಸ್ವಾಮಿಯೇ, ಕಾಣ–(ನಿನ್ನ ಸೌನ್ದರ್ಯವನ್ನು) ಕಾಣುವಂತೆ, ವಾರಾಯ್–ನೀನು ಬರಬೇಕು, ಎನ್ಱು ಎನ್ಱು–ಎಂದು ಕೂಗಿ ಕೂಗಿ, ಕಣ್ಣುಮ್ ವಾಯುಮ್–ಕಣ್ಣುಗಳೂ ಬಾಯಿಯೂ, ತುವರ್‌ನ್ದು–ಶುಷ್ಕವಾಗಿ (ಒಣಗಿ), ನಾಣಿ – ಲಜ್ಜಾನ್ವಿತನಾಗಿ, ನಲ್‌ನಾಡು – ಒಳ್ಳೇ ದೇಶದಲ್ಲಿ, ಅಡಿಯೇಱ–ದಾಸನಾದ ನಾನು, ಅಲಮನ್ದಾಲ್–ಹೀಗೆ ಮೊರೆಯಿಟ್ಟು ಅಲೆಯುತ್ತಿದ್ದರೆ, ಒರುನಾಳ್ ಇರಙ್ಗಿ–ಒಂದುದಿನ ಕೃಪೆಮಾಡಿ, ನೀ–ನೀನು, ಕಾಣ–ನಾನು ಕಾಣುವಂತೆ, ವಾರಾಯ್–ಬರುವುದಿಲ್ಲ. ಅನ್ದೋ–ಅಯ್ಯೋ!

( ಸ–ಗಾ–ರ ॥ )—

ಅತ್ಯನ್ತನೀಲಮಣಿಪರ್ವತ! ದೀಪ್ರಮೌಳೇ!
ಸ್ವಾಮಿನ್ನುಪೇಹಿ ಪುರತಸ್ತ್ವಿತಿ ವಾಚ ನೇತ್ರೇ।
ಶೋಷೋಽಸ್ತಿ ಮೇಽತ್ರ ತೃಷಯಾ! ತ್ರಪಯಾ ಕಿಲಾಹಂ
ಕ್ಲಿನ್ನೋಽಸ್ಮಿ ಹನ್ತ! ನ ಹಿ ಜಾತು ಚ ಮಾಮುಪೈಷಿ ॥

ತಾ॥ (ನಾನು ಹೀಗೆ ನಿನ್ನನ್ನು ಕೂಗಿ ಕೂಗಿ ಕಣ್ಣೂ ಬಾಯಿಯೂ ಒಣಗಿ ಲಜ್ಜೆಯಿಂದ ಅಲೆಯುತ್ತಿದ್ದರೆ ನೀನು ಕೃಪೆಮಾಡಿ ನಾನು ಕಾಣುವಂತೆ ಜಾಜ್ವಲ್ಯಮಾನ ನೀಲಾಳಕಬನ್ಧಬನ್ಧುರೋತ್ತಮಾಙ್ಗನಾಗಿಯೂ, ನೀಲಜ್ಯೋತಿರ್ಮಯ ದಿವ್ಯರೂಪನಾಗಿ ಉದ್ಯನ್ನೀಲಗಭಸ್ತಿಮಾಲಿವಿಲಸಿತನಾಗಿಯೂ, ಪುಷ್ಪಹಾಸ ಸುಕುಮಾರವಾದ ನೀಲಮಣಿಪರ್ವತವು ನಡೆದುಬರುವಂತೆ ನನ್ನ ಸಮೀಪಕ್ಕೆ ಒಂದು ದಿನ ಬರುವುದಿಲ್ಲವಲ್ಲಾ! ಅಯ್ಯೋ! ಏನು ಮಾಡಲಿ—ಎಂದು ಭಾವವು.)

(೩) ಮುಡಿಶೇರ್ ಶೆನ್ನಿಯಮ್ಮಾ ನಿನ್‌ಮೊಯ್‌ಪೂಮ್
ತಾಮತ್ತುಣ್ಣಾಯ್,
ಕಡಿಶೇರ್ ಕಣ್ಣ ಪ್ಪೆರುಮಾನೇ ಯೆನ್ಱೆನ್ಱಙ್ಗ ಯಱುದಕ್ಕಾಲ್,
ಪಡಿಶೇರ್ ಮಕರಕ್ಕುಳೈಕಳುಮ್ ಪವಳವಾಯುಮ್
ನಾಲ್‌ತೋಳುಮ್,
ತುಡಿಶೇರಿಡೈಯುಮಮೈನ್ದದೋರ್ ತೂನೀರ್
ಮುಕಿಲ್‌ಪೋಲ್ ತೋನ್ಱಾಯೇ.

ಪ್ರ|| ಮುಡಿಶೇರ್ – ದಿವ್ಯಕಿರೀಟದೊಡನೆ ಕೂಡಿದ, ಶೆನ್ನಿ – ಶಿರಸ್ಸುಳ್ಳ, ಅಮ್ಮಾ–ಸ್ವಾಮಿಯೇ, ನಿ–ನಿನ್ನ, ಮೊಯ್ – ನಿಬಿಡವಾದ, ಪೂಮ್ ತಾಮ–ರಮ್ಯವಾದ ಕಾನ್ತಿಯುಳ್ಳ, ತಣ್–ಶೀತಳವಾದ, ತ್ತುೞಾಯ್–ತುಳಸೀದಳಗಳಿಂದ ಕೂಡಿದ, ಕಡಿಶೇರ್–ಪರಿಮಳಭರಿತವಾದ, ಕಣ್ಣಿ–ಮಾಲೆಯನ್ನು ಧರಿಸಿರುವ, ಪೆರುಮಾನೇ–ಸ್ವಾಮಿಯೇ!, ಎನ್ಱು ಎನ್ಱು–ಎಂದು ಕೂಗಿ ಕೂಗಿ, ಏಙ್ಗಿ ಅೞುದಕ್ಕಾಲ್–ಬಿಕ್ಕಿ ಬಿಕ್ಕಿ (ನಾನು) ಅತ್ತರೆ, ಪಡಿಶೇರ್–ಶರೀರಕ್ಕೆ ತಕ್ಕಂತೆ ಸೇರಿರುವ, ಮಕರಕ್ಕುೞೈಕಳುಮ್ – ಮಕರಕುಣ್ಡಲ ಶೋಭಿತ ಕರ್ಣಪುಟಗಳೂ, ಪವಳವಾಯುಮ್–ಹವಳದಂತೆ ಇರುವ ಅಧರವೂ, ನಾಲ್ತೋಳುಮ್–ಚತುರ್ಭುಜಗಳೂ, ತುಡಿಶೇರ್–ಅತಿಸೂಕ್ಷ್ಮವಾದ, ಇಡೈಯುಮ್–ಮಧ್ಯಪ್ರದೇಶವೂ, ಅಮೈನ್ದದು – ಸೇರಿ ರಮಣೀಯವಾಗಿರುವ, ಓರ್–ಅದ್ವಿತೀಯವಾದ, ತೂನೀರ್–ನಿರ್ಮಲೋದಕ ಪರಿಪೂರ್ಣವಾದ (ಸೌಲಭ್ಯಗುಣ ಪರಿಪೂರ್ಣವಾದ), ಮುಕಿಲ್ ಪೋಲ್–ಮೇಘದಂತೆ, ತೋನ್ಱಾಯೇ–(ನನಗೆ) ತೋರಬೇಕು.

( ಸ–ಗಾ-ರ || )—

ಭಾಸ್ವತ್ಕಿರೀಟ! ಮಮ ನಾಥ! ಲಸತ್ತುಲಸ್ಯಾ
ಮಾಲಾಂ ಬಿಭರ್ಷಿ ನನು ಚೇತಿ ವೃಥಾ ವಿಲಪ್ಯ |
ಶ್ರಾನ್ತಾ ವಯಂ ವಿಮಲಮೇಘನಿಭಾಭ್ಯುಪೇಹಿ
ಶ್ರೀವರ್ಣ! ಚತುರ್ಭುಜ! ಸುಕುಣ್ಡಲ! ಬಿಮ್ಬವಕ್ತ್ರ! ||

ತಾ|| "ದಿವ್ಯಕಿರೀಟಧಾರಿಯಾದ ಸ್ವಾಮಿಯೇ! ರಮ್ಯತುಲಸೀಮಾಲಾಧರನೇ!"—ಎಂದು ನಾನು ಕೂಗಿ ಕೂಗಿ ಅತ್ತರೆ, ನಿನ್ನ ಮಕರಕುಂಡಲ ಶೋಭಿತಶ್ರೋತ್ರ–ಪ್ರವಾಳಾಧರ – ಚತುರ್ಭುಜ– ತನುಮಧ್ಯಗಳಿಂದ ಕೂಡಿ ರಮಣೀಯವಾದ ನೀಲಮೇಘಶ್ಯಾಮಲವಾದ ರೂಪದಿಂದ ನನ್ನೆದುರಿಗೆ ನೀನು ಬಂದು ತೋರಬೇಕು.

(೪) ತೂನೀರ್ ಮುಕಿಲ್ಪೋಲ್ ತೋನ್ಱುಮ್ ನಿನ್
ಶುಡರ್ಕೊಳ್ ವಡಿವುಮ್ ಕನಿವಾಯುಮ್,
ತೇನೀರ್ ಕಮಲಕ್ಕಣ್ಕಳುಮ್ ವನ್ದೆನ್ ಶಿನ್ದೈನಿಱೈನ್ದವಾ,
ಮಾನೀರ್ ವೆಳ್ಳಿಮಲೈತನ್ಮೇಲ್ ವಣ್ಕಾರ್
ನೀಲಮುಕಿಲ್ಪೋಲ,
ತೂನೀರ್ಕ್ಕಡಲುಳ್ ತುಯಿಲ್ವಾನೇ ಯೆನ್ದಾಯ್
ಶೊಲ್ಲಮಾಟ್ಟೇನೇ.

ಪ್ರ॥ ಮಾನೀರ್ – ಮಹಾ ಜಲರಾಶಿಯಲ್ಲಿರುವ,' ವೆಳ್ಳಿಮಲೈತನ್ಮೇಲ್ – ಬೆಳ್ಳಿಯ ಬೆಟ್ಟದಮೇಲೆ, ವಣ್‌ಕಾರ್ ನೀಲಮುಕಿಲ್‌ಪೋಲ–ಉದಾರವಾದ ವರ್ಷ ಕಾಲದ ನೀಲಮೇಘದಂತೆ, ತೂನೀರ್ – ನಿರ್ಮಲೋದಕವುಳ್ಳ, ಕಡಲುಳ್– ಸಮುದ್ರದಲ್ಲಿ, ತುಯಿಲ್‌ವಾನೇ – (ಶೇಷಶಾಯಿಯಾಗಿ) ನಿದ್ರೆಮಾಡುವವನೇ, ಎನ್ತಾಯ್ – ನನ್ನ ತಂದೆಯಾದ ಸ್ವಾಮಿಯೇ, ತೂನೀರ್ ಮುಕಿಲ್‌ಪೋಲ್– ಪರಿಶುದ್ಧೋದಕವುಳ್ಳ ಮೇಘದಂತೆ, ತೊನ್ರುಮ್–ತೋರುವ, ನೀ–ನಿನ್ನ, ಶುಡರ್ ಕೊಳ್ ವಡಿವುಮ್–ತೇಜಃಪ್ರಕಾಶವುಳ್ಳ ಶರೀರವೂ, ಕನಿವಾಯುಮ್ – ಬಿಂಬ ಫಲದಂತೆ ಇರುವ ವದನವೂ, ತೇಽ ನೀರ್–ಮಧುಸ್ಯನ್ದಿಯಾದ, ಕಮಲ–ಕಮಲ ಗಳಂತೆ ಇರುವ, ಕಣ್‌ಕಳುಮ್–ನೇತ್ರಗಳೂ, ವನ್ದು–ಇಲ್ಲಿ ಬಂದು, ಎಽ ಶಿನ್ದೈಲ್– ನನ್ನ ಮನಸ್ಸಿನಲ್ಲಿ, ನಿಱೈನ್ದವಾ–ತುಂಬಿದ ರೀತಿಯನ್ನು, ಶೊಲ್ಲಮಾಟ್ಟೇನೇ – ವರ್ಣಿಸಲಾರೆನು.

( ಸ–ಗಾ–ರ ॥ )—

ಕ್ಷೀರಾಮ್ಬುಧೌ ತು ಶಯನಾದ್ರಜತಾದ್ರಿಶೃಙ್ಗೇ
ತ್ವಂ ನೀಲಮೇಘಸದೃಶೋಽಸಿ! ಸುನೀಲಮೂರ್ತೇ !
ಬಿಮ್ಬಾಧರಶ್ಚ ಮಧುಮತ್ಕಮಲಾಕ್ಷಿಯುಗ್ಮಂ
ಚಿತ್ತೇ ಮಮಾಸ್ತಿ ಭರಿತಂ ತವ ! ಕಿಂ ವದೇಯಮ್ ? ॥

ತಾ॥ ನೀನು ಕ್ಷೀರಾಬ್ಧಿಯಲ್ಲಿ ಶೇಷಶಾಯಿಯಾಗಿ ನೀಲಮೇಘಶ್ಯಾಮನಾಗಿ ರುವುದರಿಂದ ಮಹಾಜಲರಾಶಿಯಲ್ಲಿ ಒಂದು ಬೆಳ್ಳಿಯ ಬೆಟ್ಟದಮೇಲೆ ನೀಲಮೇಘವು ಇರುವಂತೆ ಕಾಣುತ್ತಿದೆ. ಹೀಗೆ ಸಮುದ್ರದಲ್ಲಿ ನಿದ್ರೆಮಾಡುತ್ತಿರುವ ನನ್ನ ತಂದೆ ಯೇ! ನಿನ್ನ ನೀಲಮೇಘಸದೃಶವಾದ ಶರೀರವೂ, ಬಿಂಬಫಲಸದೃಶವಾದ ವಕ್ತ್ರವೂ, ಮಧ್ವಸ್ಯನ್ದಿ ಪದ್ಮಸದೃಶವಾದ ನೇತ್ರಯುಗ್ಮವೂ ಬಂದು ನನ್ನ ಮನಸ್ಸಿ ನಲ್ಲಿ ಪರಿಪೂರ್ಣವಾಗಿ ಪ್ರಕಾಶಿಸುತ್ತಿರುವ ಪ್ರಕಾರವನ್ನು ನಾನು ವರ್ಣಿಸಲಾರೆನು.

(೫) ಶೊಲ್ಲಮಾಟ್ಟೇನಡಿಯೇನುನ್ ತುಳಬ್ಬು ಶೋದಿ
ತ್ತಿರುಪ್ಪಾದವೆ,
ಎಲ್ಲೈಯಿಲ್ ಶೀರಿಳನಾಯಿಱಿರಣ್ಡುಪೋಲೆನ್ನುಳ್ಳವಾ,
ಅಲ್ಲಲೆನ್ನುಮಿರುಳ್ ಶೇರ್‌ದಱ್ಕುಪಾಯಮೆನ್ನೇ ಆಳಿಶೊಲ್,
ಮಲ್ಲೈಞಾಲಮುಱುದುಣ್ಡ'ಮಾನೀರ್ ಕೊಣ್ಡಲ್ ವಣ್ಣನೇ.

ಪ್ರ|| ಆೞಿಶೂೞ್-ಸಮುದ್ರಪರಿವೃತವಾದ, ಮಲ್ಲೈಞ್ಞಾಲ (ಮಲ್ಲಲ್ಞಾಲ)-ಮಹಾಪ್ರಪಂಚವನ್ನು, ಮುೞುದುಣ್ಡ-ಸಮಗ್ರವಾಗಿ ಭಕ್ಷಿಸಿದ, ಮಾನೀರ್-ಮಹಾ ಜಲವುಳ್ಳ, ಕೊಣ್ಡಲ್ವಣ್ಣನೇ-ನೀಲಮೇಘಕ್ಕೆ ಸದೃಶವಾದ ವರ್ಣವುಳ್ಳವನೇ, ಅಡಿಯೇನ್-ದಾಸಭೂತನಾದ ನಾನು, ಶೊಲ್ಲಮಾಟ್ಟೇನ್-ವರ್ಣಿಸಲಾರೆನು ಉನ್-ನಿನ್ನ, ತುಳಙ್ಗುಶೋದಿ-ಮಹಾ ಪ್ರಕಾಶವುಳ್ಳ, ತಿರುಪ್ಪಾದಮ್-ಪಾದಗಳು, ಎಲ್ಲೈ ಇಲ್ಶೀರ್ - ಅಪಾರವಾದ ಸೌನ್ದರ್ಯವುಳ್ಳ, ಇಳನಾಯಿಱು - ಬಾಲಸೂರ್ಯರು, ಇರಣ್ಡುಪೋಲ್-ಎರಡು ಇರುವಂತೆ, ಎನ್ ಉಳ್ಳವಾ-ನನ್ನೊಳಗೆ ಪ್ರಕಾಶಿಸುತ್ತಿವೆ. ಅಲ್ಲಲ್ ಎನ್ನುಮ್ - ದುಃಖರೂಪವೆಂಬ, ಇರುಳ್ - ಅಜ್ಞಾನಾನ್ಧಕಾರವು (ವಿಸ್ಮೃತಿಯು), ಶೇರ್ದಱ್ಕು-ಸೇರುವುದಕ್ಕೆ (ಉಂಟಾಗಲು), ಉಪಾಯಮ್ ಎನ್-ಏನು ಮಾರ್ಗವೋ? (ನೀನೇ ಹೇಳಬೇಕು.)

( ಸ-ಗಾ-ರ || )—

ಭುಕ್ತಾಖಿಲಾಬ್ಧಿವೃತಭೂಮಿತಲೋಽಸಿ ಹಿ ತ್ವಂ
ನೀಲಾಬ್ದವರ್ಣ! ನ ಹಿ ವಕ್ತುಮಹಂ ತು ಶಕ್ತಃ |
ತ್ವತ್ಪಾದಯುಗ್ಮಮಿಹ ಭಾಸ್ವರಮಸ್ತಿ ಸಕ್ತಂ
ಚಿತ್ತೇ ಮಮಾದ್ಯ ರವಿಯುಗ್ಮಮಿವಾಸ್ಯ ನಿಟ್ಕಾ ? ||

ತಾ|| ಸಮುದ್ರಪರಿವೃತವಾದ ಮಹಾಪ್ರಪಂಚವನ್ನು ಭಕ್ಷಿಸಿದ ನೀಲಮೇಘ ವರ್ಣನೇ! ದಾಸನಾದ ನಾನು ನಿನ್ನ ಮಹಿಮೆಯನ್ನು ವರ್ಣಿಸಲಾರೆನು. ನಿನ್ನ ತೇಜೋವಿಶಿಷ್ಟವಾದ ಪಾದಗಳು ಎರಡೂ ಎರಡುಬಾಲಸೂರ್ಯರಂತೆ ಅತ್ಯನ್ತ ಸುನ್ದರವಾಗಿ ನನ್ನ ಮನಸ್ಸಿನಲ್ಲಿ ಪ್ರಕಾಶಿಸುತ್ತಿವೆ. ಹೀಗಿರುವಲ್ಲಿ ವಿಸ್ಮೃತಿಯು ಉಂಟಾಗಬೇಕಾದರೆ ಉಪಾಯವು ಯಾವುದೋ ನೀನೇ ಹೇಳಬೇಕು. (ನಾನು ಅವುಗಳನ್ನು ಎಂದಿಗೂ ಮರೆಯಲಾರೆನು—ಎಂದು ಭಾವವು.)

(೭) ಕೊಣ್ಡಲ್ವಣ್ಣಾ ಕುಡಕ್ಕೂತ್ತಾ ವಿನೈಯೇನ್ ಕಣ್ಣಾ
ಕಣ್ಣಾ, ಎನ್
ಅಣ್ಡವಾಣಾ ವೆನ್ಱೆನ್ನೈ ಯಾಳ ಕೂಪ್ಪಿಟ್ಟಱೈತ್ತಕ್ಕಾಲ್,
ವಿಣ್ಣುಮೇಲ್ ತಾನ್ ಮಣ್ಮೇಲ್ ತಾನ್
ವಿರಿನೀರ್ಕ್ಕಡಲ್ ತಾನ್ ಮಱ್ಱುತ್ತಾನ್,
ತೊಣ್ಣನೇನ್ ಕೞಲ್ ಕಾಣ ಪ್ಪೊರುನಾಳ್ ವನ್ದು
ತೋನ್ಱಾಯೇ.

ಪ್ರ॥ ಕೊಣ್ಣಲ್ ವಣ್ಣಾ–ನೀಲಮೇಘವರ್ಣನೇ, ಕುಡಕ್ಕೂತ್ತಾ – ಘಟಲೀಲಾಲೋಲನೇ, ವಿನೈಯೇ–ಪಾಪಿಯಾದ ನನಗೆ, ಕಣ್ಣಾ–ನೇತ್ರಪ್ರಿಯನಾದ, ಕಣ್ಣಾ – ಶ್ರೀ ಕೃಷ್ಣನೇ, ಎ ಅಣ್ಣವಾಣಾ – ನನಗೆ ಪ್ರಾಪ್ಯನಾದ ಪರಮಪದ ನಾಥನೇ, ಎನ್ರು–ಎಂದು ಹೇಳಿ, ಎನ್ನೈಆಳ–ನನ್ನನ್ನು ಕಿಂಕರನನ್ನಾಗಿಮಾಡಿ ನೀನು ಆಳುವಂತೆ, ಕೂಪ್ಪಿಟ್ಟು–(ನಾನು ಆದರಾತಿಶಯದಿಂದ) ಕೂಗಿ, ಅಞ್ಶೃತ್ತ ಕ್ಕಾಲ್–ಕರೆದರೆ, ವಿಣ್‌ತನ್ಮೇಲ್ ತಾ–ಪರಮಪದದಲ್ಲಾಗಲೀ, ಮಣ್‌ಮೇಲ್ ತಾ–ಭೂಮಿಯಮೇಲಾಗಲೀ, ವಿರಿನೀರ್‌ಕಡಲ್ ತಾ–ವಿಸ್ತೀರ್ಣವಾದ ನೀರುಳ್ಳ ಸಮುದ್ರದಲ್ಲಾಗಲೀ, ಮಱ್ಱು ತಾ–ನಿನ್ನಲ್ಲಿ ನಿಂತಾಗಲೀ, ತೊಣ್ಣನೇ–ಚಪಲ ನಾದ ನಾನು, ಉಱಕ್ಕಾಲ್ ಕಾಣ–ನಿನ್ನ ಪಾದಗಳನ್ನು ಕಾಣಲು, ಒರುನಾಳ್– ಒಂದುದಿನ, ವನ್ದು ತೋಣ್ರಾಯೇ – (ನೀನು) ಬಂದು (ನನ್ನ ಎದುರಿಗೆ) ತೋರ ಬೇಕು.

( ಸ–ಗಾ–ರ ॥ ) —

ನೀಲಾಮ್ಬುದಾಭ! ಘಟಲೀಲ! ಮಮಾಕ್ಷಿರೂಪ!
ಶ್ರೀಕೃಷ್ಣ! ನಾಥ! ಮಮ ದಿವ್ಯ ಜಗನ್ನಿವಾಸ! |
ಇತ್ಯೇವ ದಾಸ್ಯವಿಧಯೇ ಕಿಲ ವಚ್ಮಿ ಭೂವ್ಯಾಂ
ವಾರ್ಧೌ ದಿವಿ ಸ್ವಮಹಸಾ ಸಮುಪೈಹಿ ಸೇವ್ಯ! ॥

ತಾ॥ ನೀಲಮೇಘವರ್ಣನೇ! ಕುಂಭಲೀಲಾಲೋಲನೇ! ನನಗೆ ನೇತ್ರಪ್ರಿಯ ನಾದ ಶ್ರೀ ಕೃಷ್ಣನೇ! ಪರಮಪದನಾಥನೇ!—ಎಂದು ಕೂಗಿ ನಾನು ಮೊರೆಯಿಟ್ಟರೆ, ನೀನು ಪರಮಪದದಲ್ಲಾಗಲೀ, ಭೂಮಿಯಮೇಲಾಗಲೀ, ಸಮುದ್ರದಲ್ಲಾಗಲೀ, ನಿನ್ನಲ್ಲಿಯೇ ನಿಂತಾಗಲೀ (ಚಪಲನಾದ ನಾನು ನಿನ್ನ ಪಾದಗಳನ್ನು ಕಾಣು ವಂತೆ)—ಒಂದುದಿನ ನನ್ನ ಎದುರಿಗೆ ಬಂದು ದೃಶ್ಯನಾಗಬೇಕು.

(೭) ವನ್ದು ತೋಣ್ರಾಯುಣ್ಣಿಲಾಙ್ ವೈಯಮೞ್ ತಾಯ
ಮಲರಡಿಕ್ಕೀೞ್,
ಮುನ್ದಿವನ್ದು ಯಾನಿಱ್ಱ ಮುಕಪ್ಪೇ ಕೂವಿ
ಪ್ಪಣಿಕೊಳ್ಳಾಯ್,
ಶೆನ್ದಾಮ ಕಮಲಕ್ಕಣ್ ಕೈಕಾಲ್ ಶಿವನ್ದವಾಯೋರ್
ಕರುನಾಯಿಱು,
ಅನ್ದಮಿಲ್ಲಾಕ್ಕದಿರ್‌ಪರಪ್ಪಿ ಯೆಲರ್‌ನ್ದದೊಕ್ಕುಮಮ್ಮಾನೇ.

ಪ್ರ|| ತಣ್-ಶೀತಳವಾದ, ಶೆಮ್‌ಕಮಲಮ್ – ಕೆಂದಾವರೆಯಂತೆ ಇರುವ, ಕಣ್ ಕೈಕಾಲ್-ಕಣ್ಣು ಕೈಕಾಲುಗಳನ್ನೂ, ಶಿವನ್ದವಾಯ್ – ಕೆಂಪಾದ ಬಾಯಿಯನ್ನೂ ಪಡೆದಿರುವ, ಓರ್ ಕರುನಾಯಿಱು – ಒಂದು ಕಪ್ಪಾದ ಸೂರ್ಯನು, ಅನ್ದಮಿಲ್ಲಾ–ಅನನ್ತವಾದ, ಕದಿರ್‌ಪರಪ್ಪಿ–ಕಿರಣಗಳನ್ನು ಹರಡಿಕೊಂಡು, ಅಲರ್ನ್ದದು ಒಕ್ಕುಮ್-ವಿಸ್ತೀರ್ಣವಾದಂತೆ ಇರುವ, ಅಮ್ಮಾನೇ–ಸ್ವಾಮಿಯೇ, ವನ್ದು–(ಆ ಸೌನ್ದರ್ಯದೊಡನೆ) ಬಂದು, ತೋಣ್ಱಾಯ್ – (ನನ್ನ ಎದುರಿಗೆ) ತೋರಬೇಕು. ಅನ್ಱೇಲ್–ಅಲ್ಲದಿದ್ದರೆ, ವೈಯಮ್-ಎಲ್ಲಾ ಲೋಕಗಳನ್ನೂ, ತಾಯ-ಆಕ್ರಮಿಸಿ ಅಳೆದುಕೊಂಡ, ಮಲರ್–ವಿಕಸಿತವಾದ ತಾವರೆಹೂವಿನಂತೆ ಇರುವ, ಅಡಿಕ್ಕೀೞ್-ಪಾದಗಳ ಕೆಳಗೆ, ಮುನ್ದಿ–ಮುಂಚೆ, ಯಾ಼ ವನ್ದು–ನಾನು ಬಂದು, ನಿಱ್ಪ–(ಧರಿಸಿ) ನಿಲ್ಲುವಂತೆ, ಉ಼ ಮುಕಪ್ಪೇ – ನಿನ್ನಮುಂದೆ, ಕೂವಿ – ಕರೆದು, ಪಣಿಕೊಳ್ಳಾಯ್–ನನ್ನ ಕೈಂಕರ್ಯವನ್ನು ಅಂಗೀಕರಿಸು.

( ಸ–ಗಾ–ರ || )—

ಪದ್ಮಾಕ್ಷಿ– ಹಸ್ತ–ಪದ! ರಕ್ತಸರೋಜವಕ್ತ್ರ!
ಸೂರ್ಯಾಭ ನೀಲಮಣಿರಶ್ಮಿನಿಧೇ! ವಿಭೋ! ಮಾಮ್ |
ಆಜಾಹಿ ಮತ್ಪುರತ ಏವ! ನ ಚೇತ್ತ್ವದಂಘ್ರೌ
ದಾಸ್ಯಾಯ ಮಾಂ ವೃಣು ಸಮಸ್ತಜಗತ್ಪ್ರಮಾಣೇ ||

ತಾ|| ಕೆಂದಾವರೆಯಂತೆ ಕಣ್ಣು-ಕೈಕಾಲುಗಳನ್ನೂ ಕೆಂಪಾದ ಬಾಯಿಯನ್ನೂ ಉಳ್ಳ, ಒಂದು ಕಪ್ಪಾದ ಸೂರ್ಯನು ಅನನ್ತ ಕಿರಣಯುಕ್ತನಾಗಿ ಸರ್ವತಃ ವ್ಯಾಪಿಸಿ ಇರುವಂತೆ ತೋರುವ ನನ್ನ ಸ್ವಾಮಿಯೇ! ನೀನು ನನ್ನ ಎದುರಿಗೆ ಆ ಸೌನ್ದರ್ಯದೊಡನೆ ಬಂದು ತೋರಬೇಕು. ಅಲ್ಲದಿದ್ದರೆ-ಸಕಲ ಲೋಕಾಕ್ರಮಣವಂ ಮಾಡಿದ ನಿನ್ನ ಪಾದಾರವಿನ್ದಗಳ ಕೆಳಗೆ ನಾನು ಬಂದು ನಿಲ್ಲುವಂತೆ, ನನ್ನನ್ನು ಕೂಗಿ ಕರೆದು ನನ್ನ ಕೈಙ್ಕರ್ಯವನ್ನು ನೀನು ಅಙ್ಗೀಕರಿಸಬೇಕು.

(೮) ಒಕ್ಕುಮೆಮ್ಮಾನುರುವಮೆನ್ಱುಳ್ಳುವರ್ ಕಣ್ಣ್ಯನ್ದು
ನಾಣಾಳುಮ್,
ತೊಕ್ಕ ಮೇಕಪ್ಪಲ್‌ಕುೞಾಙ್ಗಳ್ ಕಾಣುನ್ತೋಱುಮ್
ತೊಲೈವನ್ನಾ಼,
ತಕ್ಕವೈವರ್ ತಮಕ್ಕಾಯನ್ಱಿರೈವ್ಪದಿನ್ಮರ್ ತಾಳ್‌ಶಾಯು,
ಪುಕ್ಕ ನಲ್‌ತೇರ್ ತ್ತನಿಪ್ಪಾಕಾ ವಾರಾಯಿದುವೋ
ಪೊರುತ್ತಮೇ.

ಪ್ರ॥ 'ಅಮ್ಮಾ-ಸ್ವಾಮಿಯಾದವನ, ಉರುವಮ್ ಒಕ್ಕುಮ್ ಎನ್ಱು-ರೂಪಸೌನ್ದರ್ಯವು ಚೆನ್ನಾಗಿ ಹೊಂದಿಕೊಂಡಿದೆಯೆಂದು, ಉಳ್ಳಮ್ ಕರೈನ್ದು-ಅನ್ತರಙ್ಗವು ದ್ರವೀಭೂತವಾಗಿ, ನಾಣಾಳುಮ್ (ನಾಳ್ ನಾಳುಮ್)-ಪ್ರತಿದಿನವೂ, ತೊಕ್ಕ-ಘನವಾದ, ಮೇಕ-ಮೇಘಗಳ, ಪಲ್ಕುೞಾಙ್ಗಳ್ - ಅನೇಕ ಸಮೂಹಗಳನ್ನು, ಕಾಣುಮ್ ತೋಱುಮ್-ನೋಡುವವರೆಗೆ, ನಾನ್ ತೊಲೈವನ್-ನಾನು ಕ್ಲೇಶಪಡುವೆನು. ತಕ್ಕ-ಯೋಗ್ಯರಾದ, ಐವರ್ತಮಕ್ಕು ಆಯ್-ಐದುಮಂದಿ ಪಾಣ್ಡವರಿಗಾಗಿ, ಅನ್ಱು-ಆ ಭಾರತಯುದ್ಧವು ನಡೆದ ಕಾಲದಲ್ಲಿ, ಈರ್ ಐಮ್ ಪದಿನ್ಮರ್-(ದುರ್ಯೋಧನಾದಿ) ನೂರುಮಂದಿಯೂ, ತಾಳ್ಶಾಯ-ನಿರ್ಮೂಲಿತರಾಗುವಂತೆ, ಪೊಕ್ಕ-ಸೇನೆಗಳ ನಡುವೆ ಪ್ರವೇಶಿಸಿದ, ನಲ್ತೇರ್-ಒಳ್ಳೇ ರಥವನ್ನು, ತನಿಪ್ಪಾಗಾ-ನಡೆಸಿದ ಅದ್ವಿತೀಯ ಸಾರಥಿಯಾದವನೇ, ವಾರಾಯ್ - (ಆ ಸೌನ್ದರ್ಯದೊಡನೆ) ನೀನು ಬರುವುದಿಲ್ಲ. ಇದುವೋ ಪೊರುತ್ತಮೇ - ಇದೋ ಆಶ್ರಿತ ವಿಷಯದಲ್ಲಿ ನಿನಗೆ ಇರುವ ಸಂಗಸ್ವಭಾವವು ?

( ಸ-ಗಾ-ರ ॥ )—

ಚೇತೋಹರಂ ಮಮ ವಿಲೋಕ್ಯ ಚ ಮೇಘಬೃನ್ದಂ
ಕ್ಲಿನ್ನೋಽಸ್ಮಿ ನಾಥ! ತನುಸನ್ನಿಭಮಸ್ತಿ ಚೇತಿ ।
ಪಞ್ಚಾಶ್ರಿತಾರ್ಥಮಹ ವತ್ಸಲ! ಪಾರ್ಥಸೂತ-
ಸ್ತ್ವಂ ತಾನ್ ಶತಂ ಚ ಹತವಾನ್! ನ ಹಿ ಮಾಮುಪೈಷಿ ॥

ತಾ॥ ನಿನ್ನ ರೂಪಸೌನ್ದರ್ಯಕ್ಕೆ ಅನುಗುಣವಾಗಿದೆಯೆಂದು ನಾನು ನೀಲ ಮೇಘ ಸಮೂಹಗಳನ್ನು ನೋಡಿ ಕ್ಲೇಶಪಡುವೆನು. ಐದುಮಂದಿ ಪಾಣ್ಡವರಿಗಾಗಿ ಭಾರತಯುದ್ಧದಲ್ಲಿ ನೂರುಮಂದಿ ಕೌರವರನ್ನೂ ನಾಶಪಡಿಸುವಂತೆ ರಥವನ್ನು ನಡೆಸಿದ ಅದ್ವಿತೀಯನಾದ ಪಾರ್ಥಸಾರಥಿಯೇ! ನಿನ್ನ ಆ ಸೌನ್ದರ್ಯದೊಡನೆ ನನ್ನ ಎದುರಿಗೆ ನೀನು ಬರುವುದಿಲ್ಲ. ಇದೋ ನಿನ್ನ ಆಶ್ರಿತವಾತ್ಸಲ್ಯದ ಕ್ರಮವು? (ಹೀಗೆ ನೀನು ನನ್ನ ಮನೋರಥಭಂಗವಂ ಮಾಡಬಹುದೇ ?)

(೯) ಇದುವೋ ಪೊರುತ್ತಮ್ ಮಿನ್ನಾೞಿಪ್ಪಡೈ-
ಯಾಯೇಱುಮಿರುಮ್ ಶಿಱೈಪ್ಪುಳ್,
ಅದುವೇ ಕೊಡಿಯಾವುಯರ್ತ್ತಾನೇ ಯೆನ್ಱೆನ್ಱೇತ್ತಿ
ಯೞುದಕ್ಕಾಲ್,
ಎದುವೇಯಾಕಕ್ಕರುದುಙ್ಗೊಲಿಮ್ಮಾಞಾಲಮ್
ಪೊಱೈತೀರ್ಪ್ಪಾನ್,
ಮದುವಾರ್ ಶೋಲೈ ಯುತ್ತರಮದುರೈ ಪ್ಪಿಱನ್ದ ಮಾಯನೇ.

ಪ್ರ|| ಮಿೞ್ ಆೞಿಪ್ಪಡೈಯಾಯ್-ಮಿಂಚುತ್ತಿರುವ ಚಕ್ರವನ್ನು ಆಯುಧವಾಗಿ ಉಳ್ಳವನೇ, ಏಱುಮ್-ವಾಹನವಾಗಿ ಮೇಲೆ ಹತ್ತಲ್ಪಡುವ, ಇಱುಮ್ ಶಿಱೈ-ದೊಡ್ಡರೆಕ್ಕೆಗಳುಳ್ಳ, ಪುಳ್ ಅದುವೇ – ಗರುಡಪಕ್ಷಿಯನ್ನೇ, ಕೊಡಿಯಾ ಉಯರ್ತ್ತಾನೇ-ಧ್ವಜವಾಗಿ ಎತ್ತಿ ಇರುವವನೇ, ಇದುವೋ ಪೊಱುತ್ತಮ್-ಇದೋ ನಿನಗೆ ಉಚಿತವಾದ ಕೃತ್ಯವು, ಎನ್ಱು ಎನ್ಱು-ಎಂದು ಹೇಳಿ ಹೇಳಿ, ಏಙ್ಗಿ ಅೞುದಕ್ಕಾಲ್-ಬಿಕ್ಕಿ ಬಿಕ್ಕಿ ನಾನು ಅತ್ತರೆ, ಇ ಮ್ಮಾಞ್ಞಾಲಮ್-ಈ ವಿಶಾಲವಾದ ಭೂಮಿಯ, ಪೊಱೈ ತೀರ್ಪ್ಪಾನ್-ಭಾರವನ್ನು ನಾಶಪಡಿಸುವುದಕ್ಕಾಗಿ, ಮದುವಾರ್ ಶೋಲೈ-ಮಧುಸ್ಯಂದಿಯಾದ ಉದ್ಯಾನಗಳುಳ್ಳ, ಉತ್ತರಮದುರೈ-ಉತ್ತರ ಮಧುರಾಪುರಿಯಲ್ಲಿ ಪಿಱನ್ದ-ಅವತರಿಸಿದ, ಮಾಯನೇ-ಆಶ್ಚರ್ಯಭೂತನು, ಎದುವೇ ಆಕ-ಏನೆಂದು, ಕರುದುಮ್ ಕೊಲ್- ಭಾವಿಸುವನೋ ?

( ಸ-ಗಾ-ರ || )—

ದೀಪ್ರಸ್ವಚಕ್ರಧರ! ಮಾಧವ! ತಾರ್ಕ್ಷ್ಯಕೇತೋ!
ಕಿಂ ಯುಕ್ತಮೇತದಿತಿ ಚೇದ್ವಿಲಪಾಮಿ ಭೂಯಃ।
ಭಾರಾಪನೋದನ! ಭುವೋ ಮಧುರಾಪುರೇ ತ್ವಂ
ಜಾತೋಽಸಿ ಸಸ್ಯಭರಿತೇ! ಕಿಮು ಮಾಂ ವೃಣೀಷೇ ? ॥

ತಾ|| ಚಕ್ರಾಯುಧಧಾರಿಯೇ! ಗರುಡಧ್ವಜನೇ! ಇದೋ ನಿನಗೆ ಉಚಿತವಾದ ಕೃತ್ಯವು?—ಎಂದು ಹೇಳಿ ಹೇಳಿ ಬಿಕ್ಕಿ ಬಿಕ್ಕಿ ನಾನು ಅಳುತ್ತಿದ್ದರೆ, ಭೂಭಾರಹರಣವಂಮಾಡಲು ಉತ್ತರಮಧುರೆಯಲ್ಲಿ ಅವತರಿಸಿದ ಶ್ರೀಕೃಷ್ಣನು ನನ್ನ ವಿಷಯದಲ್ಲಿ ಏನೆಂದು ಭಾವಿಸುವನೋ! ( ನನ್ನನ್ನು ಅಂಗೀಕರಿಸುವನೋ ಇಲ್ಲವೋ ? )

(೧೦) ಪಿಱನ್ದಮಾಯಾ ಪಾರತಮ್ ಪೊರುದಮಾಯಾ ನೀಯಿನ್ನೇ,
ಶಿಱನ್ದ ಕಾಲ್ ತೀನೀರ್ ವಾನ್ ಮಣ್ ಪಿಱವುಮಾಯ
ಪೆರುಮಾನೇ,
ಕಱನ್ದಪಾಲುಳ್ ನೆಯ್ಯೇ ಪೋಲಿವಱ್ಱುಳೆಙ್ಗುಮ್
ಕಣ್ಡುಕೊಳ್,
ಇಱನ್ದು ನಿನ್ಱ ಪೆರುಮಾಯಾ ಉನ್ನೈಯೆಙ್ಗೇ ಕಾಣ್ಕೇನೇ.

ಪ್ರ|| ಪಿಱನ್ದ–ಅವತಾರಮಾಡಿದ, ಮಾಯಾ–ಆಶ್ಚರ್ಯಭೂತನೇ, ಪಾರತಮ್ ಪೊರುದ– ಭಾರತಯುದ್ಧವನ್ನುಮಾಡಿದ, ಮಾಯಾ – ಆಶ್ಚರ್ಯಚೇಷ್ಟಿತನೇ, ನೀ ಇನ್ನೇ–ನೀನು ಹೀಗೆ ಸುಲಭನಾಗಿ ಇರುವಲ್ಲಿ, ಶಿಱನ್ದ–ಆದಿಕಾರಣಭೂತನಾದ ಮಹಿಮೆಯುಳ್ಳ, ಕಾಲ್–ವಾಯು, ತೀ–ಅಗ್ನಿ, ನೀರ್–ಜಲ, ವಾ–ಆಕಾಶ, ಮಣ್–ಭೂಮಿ (ಈ ಪಞ್ಚಭೂತಗಳನ್ನೂ), ಪಿಱವುಮ್–ಮತ್ತೂ ಇತರ ಭೌತಿಕ ಪದಾರ್ಥಗಳನ್ನೂ, ಆಯುಪೆರುಮಾನೇ–ಪ್ರಕಾರಗಳಾಗಿ ಉಳ್ಳ ಸರ್ವೇಶ್ವರನೇ, ಕಱನ್ದಪಾಲುಳ್–ಕರೆದ ಹಾಲಿನೊಳಗೆ, ನೆಯ್ಯೇಪೋಲ್–ತುಪ್ಪವು (ಗುಪ್ತವಾಗಿ) ಇರುವಂತೆ, ಕಣ್ಡುಕೊಳ್ ಇಱನ್ದು–ಕಾಣಲು ಅಸಾಧ್ಯವಾಗಿ, ಇವತ್ತುಳ್–ಇವುಗಳೊಳಗೆ, ಎಙ್ಗುಮ್–ಎಲ್ಲಾ ಪ್ರದೇಶಗಳಲ್ಲೂ, ನಿನ್ಱ–ನಿಂತ, ಪೆರುಮಾಯಾ–ಮಹಾ ಮಾಯಾವಿಯೇ!, ಉನ್ನೈ–ನಿನ್ನನ್ನು, ಎಙ್ಗೇ ಕಾಣ್ಕೇನೇ–ಎಲ್ಲಿ ಕಾಣುವೆನು?

( ಸ–ಗಾ–ರ || ) —

ಮಾಯಾಮಯಾವತರಣಾದ್ಭುತವೀರವೃತ್ತ !
ಶ್ರೀಭಾರತಾಖ್ಯಯುಧಿ! ವಾರ್ಯನಿಲಾಗ್ನಿಭೂಖೈಃ |
ಸರ್ವೈಶ್ಚ ಭಾಸಿ ಪಯಸೀಹ ಘೃತಂ ಯಥಾ ತ್ವಂ !
ಸರ್ವತ್ರ ಮಾಯಿಚರಿತಂ ಕ್ವ ವಿಲೋಕಯೇ ತ್ವಾಮ್ ? ||

ತಾ|| ಅವತಾರ ಮಾಡಿದ ಆಶ್ಚರ್ಯಭೂತನೇ! ಭಾರತಯುದ್ಧದಲ್ಲಿ ಅನೇಕ ಮಾಯಾಚೇಷ್ಟಿತಗಳನ್ನು ಮಾಡಿದವನೇ!, ಪೃಥಿವ್ಯಪ್ತೇಜೋವಾಯ್ವಾಕಾಶ ಗಳೆಂಬ ಪಞ್ಚಭೂತಗಳನ್ನೂ ಇತರ ಭೌತಿಕಪದಾರ್ಥಗಳನ್ನೂ ಪ್ರಕಾರಗಳಾಗಿ ಉಳ್ಳ ಸರ್ವೇಶ್ವರನೇ! ಕರೆದ ಹಾಲಿನೊಳಗೆ ತುಪ್ಪವು ಹೇಗೆ ಗುಪ್ತವಾಗಿ ಇದೆಯೋ ಹಾಗೆಯೇ ಈ ಸರ್ವಪದಾರ್ಥಗಳಲ್ಲೂ ಗುಪ್ತನಾಗಿ ಸರ್ವತೋವ್ಯಾಪಿ ಯಾಗಿದ್ದಾಗ್ಯೂ ಕಾಣಲು ಅಸಾಧ್ಯನಾಗಿರುವ ಮಹಾಮಾಯಾವಿಯೇ! ನಿನ್ನನ್ನು ನಾನು ಎಲ್ಲಿ ಕಾಣುವೆನು?

(೧೧) ಎಙ್ಗೇ ಕಾಣ್ಕೇನೀನ್ತುಜಾಯವಮ್ಮಾತನ್ನೈ ಯಾನ್ನೆನ್ಱು,
ಅಙ್ಗೇ ತಾೞನ್ದ ಶೊಙ್ಕಳಾಲನ್ತಣ್ ಕುರುಕೂರ್
ಚ್ಚಡಕೋಪನ್,
ಶೆಙ್ಗೇೞ್ ಶೊನ್ನ ವಾಯಿರತ್ತುಳಿವೈಯುಮ್ ಪತ್ತುಮ್
ವಲ್ಲಾರ್ಕಳ್,
ಇಙ್ಗೇ ಕಾಣಇಪ್ಪಿಱಪ್ಪೇ ಮಕಿೞ್ವರೆಲ್ಲಿಯುಮ್
ಕಾಲ್ಯೆಯೇ.

ಪ್ರ॥ ಈ—ನಿರತಿಶಯ ಭೋಗ್ಯವಾದ, ತುೞಾಯ್—ತುಳಸೀಮಾಲೆಯುಳ್ಳ, ಅಮ್ಮಾನ್ ತನ್ನೈ—ಸರ್ವೇಶ್ವರನನ್ನು, ಯಾನ್—ನಾನು, ಎಙ್ಗೇಕಾಣ್ಕೇನ್—ಎಲ್ಲಿ ಕಾಣುವೆನು? ಎನ್ನು ಎನ್ನು—ಎಂದು ಹೇಳಿ ಹೇಳಿ, ಅಙ್ಗೇ—ಅವನ ಭೋಗ್ಯತೆಯಲ್ಲೂ ಸ್ವಾಮಿತ್ವದಲ್ಲೂ, ತಾೞ್ನ್ದ—ಮಗ್ನವಾಗಿರುವ, ಶೊಱ್ಕಳಾಲ್ – ಸೂಕ್ತಿಗಳಿಂದ, ಅಮ್ ತಣ್ – ರಮ್ಯವಾಗಿ ಶೀತಳವಾದ, ಕುರುಕೂರ್ – ಕುರುಕಾಪುರಿಯ, ಶಡಕೋಪನ್—ಶ್ರೀ ಶಠಾರಿಮುನಿಯು, ಶೆಮ್ ಕೇೞ್—ಆರ್ಜವದೊಡನೆ ಪ್ರಕಾಶಿಸುವಂತೆ, ಶೊನ್ನ – ರಚಿಸಿದ, ಆಯಿರತ್ತುಳ್ – ಸಹಸ್ರಪದ್ಯಮಾಲೆಯೊಳು, ಇವೈಯುಮ್ ಪತ್ತುಮ್—ಈ ಹತ್ತು ಪದ್ಯಗಳನ್ನು, ವಲ್ಲಾರ್ಕಳ್—ಬಲ್ಲವರು, ಇಙ್ಗೇಕಾಣ—ಇಲ್ಲೇ ಎಲ್ಲರೂ ಕಾಣುವಂತೆ, ಇಪ್ಪಿಱಪ್ಪೇ – ಈ ಜನ್ಮದಲ್ಲೇ, ಎಲ್ಲಿಯುಮ್ ಕಾಲೈಯೇ—ರಾತ್ರಿಯೂ ಹಗಲೂ, ಮಕಿೞ್ವರ್—(ಭಗವದನುಭವದಿಂದ) ಆನನ್ದವನ್ನು ಹೊಂದುವರು.

( ಸ—ಗಾ—ರ ॥ )—

ಶ್ರೀಸೂರಿಭೋಗ್ಯತುಲಸೀಧರಮಪ್ರಮೇಯಂ
ಪಶ್ಯಾಮ್ಯಹಂ ಕ್ವನು ಬತೇತಿ ಮುಹುಃ ಪ್ರಕೀರ್ತ್ಯ ।
ದಿವ್ಯೋಕ್ತಿಭಿಶ್ಶಠಜಿದಾಹ ಸಹಸ್ರಮತ್ರ
ಪ್ರತ್ಯಕ್ಷಮೇವ ದಶಕಂ ಪಠತಾಂ ಸುಖಂ ಸ್ಯಾತ್ ॥

ತಾ॥ "ನಿರತಿಶಯಭೋಗ್ಯವಾದ ತುಳಸೀಮಾಲೆಯನ್ನು ಧರಿಸಿರುವ ಸರ್ವೇಶ್ವರನನ್ನು ನಾನು ಎಲ್ಲಿ ಕಾಣುವೆನು ?"—ಎಂದು ಹೇಳಿ ಅವನ ಭೋಗ್ಯತೆಯಲ್ಲೂ ಸ್ವಾಮಿತ್ವದಲ್ಲೂ ಪರಿಪೂರ್ಣವಾಗಿ ಮಗ್ನವಾಗಿರುವ ಶ್ರೀಸೂಕ್ತಿಗಳಿಂದ ಶ್ರೀ ಕುರುಕಾಪುರಿಯ ಶ್ರೀ ಶಠಾರಿಮುನಿಯು ರಚಿಸಿರುವ ಸಹಸ್ರ ಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರು ಇಲ್ಲೇ ಎಲ್ಲರೂ ಕಾಣುವಂತೆ ಈ ಜನ್ಮದಲ್ಲೇ ರಾತ್ರಿಯೂ ಹಗಲೂ ಸನ್ತತವಾಗಿ ಬ್ರಹ್ಮಾನನ್ದವನ್ನು ಹೊಂದುವರು.

( ದ್ರು—ಉ—ಸಂ ॥ )—

ಸುಕ್ಷೇಮಸುನ್ದರತನುಂ ಪರಿಲಿಪ್ಸುರೀಶಂ
ಶೋಚನ್ನಿಮಂ ನಿರ್ದಹನಲೀಢ ಇವಾತಿತಪ್ತಃ ।
ಏಹ್ಯೇವಮಿತ್ಯುಪಗತಸ್ಯ ಬಹುಪ್ರಕಾರಾ—
ನಾಖ್ಯಾಯ ಶೌರಿರಧಿಪಞ್ಜುಮಮಾಜುಹಾವ ॥

( ಸ್ರ-ಗ್-ಧ-ರಾ ॥ )—

ಆಶ್ಚರ್ಯೇಹಾನ್ವಿತತ್ವಾಚ್ಛುಭಮಕುಟತಯಾ ಸ್ವಾಮಿತಾಬೋಧಕತ್ವಾತ್

ಜೀಮೂತಶ್ಯಾಮಲತ್ವಾಚ್ಛ್ರುತಸುಲಭತಯಾ ಪದ್ಮಸೂರ್ಯೋಪಮಾಜ್ಞಾತ್ ।

ಸಾರಥ್ಯಾತ್ಪಾಣ್ಡುಸೂನೋರವನಿಭರಹೃತೇರನ್ತರಾತ್ಮತ್ವಯೋಗಾತ್

ಜೀವಾಪೇಕ್ಷಾಪ್ರತೀಕ್ಷೋ ಭವತಿ ತದವನೇ ಶ್ರೀಪತಿಶ್ಷ್ಠೇತ್ಯಭಾಣಿ ॥

(ಈ ಪಞ್ಚಮದಶಕದ ಸಾರಾಂಶ—)

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನನ್ನು ಸಾಕ್ಷಾತ್ಕರಿಸಲು ಅಪೇಕ್ಷಿಸಿ, ವಾಮನಾವತಾರ—ಕೃಷ್ಣಾವತಾರಗಳ ಸೌನ್ದರ್ಯಾತಿಶಯವನ್ನೂ, ನೀಲಮಣಿಪರ್ವತಸಾದೃಶ್ಯವನ್ನೂ, ಮಕರಕುಂಡಲ – ಪ್ರವಾಳಾಧರ–ತನುಮಧ್ಯ–ಚತುರ್ಭುಜಾದ್ಯವಯವ ಶೋಭೆಯನ್ನೂ, ಸಮುದ್ರದಲ್ಲಿ ಶೇಷಶಾಯಿತ್ವದ ಭೋಗ್ಯತೆಯನ್ನೂ, ಶ್ರೀಭಗವತ್ಪಾದಾರವಿನ್ದಯುಗಳದ ದಿವ್ಯಪ್ರಕಾಶವನ್ನೂ, ದ್ಯುಲೋಕ–ಭೂಲೋಕಾದಿ ಸೇವ್ಯತ್ವವನ್ನೂ, ತ್ರಿವಿಕ್ರಮಾವತಾರದ ಮಹಿಮೆಯನ್ನೂ, ಪಾರ್ಥಸಾರಥಿಯಾಗಿ ನಡೆಸಿದ ಅದ್ಭುತಕೃತ್ಯಗಳನ್ನೂ ವರ್ಣಿಸಿ, ತಮ್ಮ ಮನೋರಥವನ್ನು ತಿಳಿಯಪಡಿಸಿ, ಸರ್ವವಸ್ತುಗುಪ್ತನಾಗಿರುವ ಮಹಾಮಾಯಾವಿಯಾದ ನಿನ್ನನ್ನು ನಾನು ಎಲ್ಲಿ ಕಾಣುವೆನೆಂದು ಹೇಳಿ ಹೇಳಿ, ಆಕ್ರನ್ದನಮಾಡಿ, ಈ ದಶಕಪಠನದಿಂದ ಇಲ್ಲಿಯೇ ಬ್ರಹ್ಮಾನನ್ದವು ಉಂಟಾಗುವುದೆಂದು ನಿರ್ಣಯಿಸಿ ಇರುತ್ತಾರೆ.

---

## ಶ್ರೀಃ

## ಅಷ್ಟಮಶತಕದಲ್ಲಿ—ಷಷ್ಠದಶಕ

### (ಎಲ್ಲಿಯುಮ್ ಕಾಲ್ಯುಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಮಲಯಾಳದೇಶದಲ್ಲಿರುವ "ತಿರುಕ್ಕಡಿತ್ತಾನಮ್" ಎಂಬ ಶ್ರೀಕಟಿಸ್ಥಲದಲ್ಲಿ ಬಿಜಯಮಾಡಿರುವ ಭಗವನ್ತನಲ್ಲಿ ಪ್ರೀತಿವಿಶಿಷ್ಟರಾಗಿ—ತದ್ಗುಣಗಳನ್ನು ವರ್ಣಿಸುತ್ತಾರೆ.)

---

(೧) ಎಲ್ಲಿಯುಮ್ ಕಾಲ್ಯೈಯುಮ್ ತನ್ನೈ ನಿನ್ನೈನ್ದು,
ನಲ್ಲವರುಳ್‌ಕಳ್ ನಮಕ್ಕೇ ತನ್ದರುಳ್‌ಶೆಯ್ವಾನ್,
ಅಲ್ಲಿಯಮರ್ ತಣ್ಣನ್ತುಳಾಯ್ ಮುಡಿಯಪ್ಪನೂರ್,
ಶೆಲ್ವರ್‌ಕಳ್ ವಾಳುಮ್ ತಿರುಕ್ಕಡಿತ್ತಾನಮೇ.

( ಧ್ರ–ಉ–ತಾ–ರ || )—

ಆಶ್ಚರ್ಯೇಹಾನ್ವಿತತ್ವಾಚ್ಛುಭಮಕುಟತಯಾ ಸ್ವಾಮಿತಾಬೋಧಕಯತ್ವಾತ್
ಜೀಮೂತಶ್ಯಾಮಲತ್ವಾಚ್ಛ್ರಿತಸುಲಭತಯಾ ಪದ್ಮಸೂರ್ಯೋಪಮಾಜ್ಞಾತ್ |
ಸಾರಥ್ಯಾತ್ಪಾಣ್ಡುಸೂನೋರವನಿಭರಹೃತೇರನ್ತರಾತ್ಮತ್ವಯೋಗಾತ್
ಜೀವಾಪೇಕ್ಷಾಪ್ರತೀಕ್ಷೋ ಭವತಿ ತದವನೇ ಶ್ರೀಪತಿಶ್ಷೇತ್ಯಭಾಣಿ ||

(ಈ ಪಞ್ಚಮದಶಕದ ಸಾರಾಂಶ—)

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನನ್ನು ಸಾಕ್ಷಾತ್ಕರಿಸಲು ಅಪೇಕ್ಷಿಸಿ, ವಾಮನಾವತಾರ—ಕೃಷ್ಣಾವತಾರಗಳ ಸೌನ್ದರ್ಯಾತಿಶಯವನ್ನೂ, ನೀಲಮಣಿಪರ್ವತಸಾದೃಶ್ಯವನ್ನೂ, ಮಕರಕುಂಡಲ – ಪ್ರವಾಳಾಧರ–ತನುಮಧ್ಯ–ಚತುರ್ಭುಜಾದ್ಯವಯವ ಶೋಭೆಯನ್ನೂ, ಸಮುದ್ರದಲ್ಲಿ ಶೇಷಶಾಯಿತ್ವದ ಭೋಗ್ಯತೆಯನ್ನೂ, ಶ್ರೀಭಗವತ್ಪಾದಾರವಿನ್ದಯುಗಳದ ದಿವ್ಯಪ್ರಕಾಶವನ್ನೂ, ದ್ಯುಲೋಕ–ಭೂಲೋಕಾದಿ ಸೇವ್ಯತ್ವವನ್ನೂ, ತ್ರಿವಿಕ್ರಮಾವತಾರದ ಮಹಿಮೆಯನ್ನೂ, ಪಾರ್ಥಸಾರಥಿಯಾಗಿ ನಡೆಸಿದ ಅದ್ಭುತಕೃತ್ಯಗಳನ್ನೂ ವರ್ಣಿಸಿ, ತಮ್ಮ ಮನೋರಥವನ್ನು ತಿಳಿಯಪಡಿಸಿ, ಸರ್ವವಸ್ತುಗುಪ್ತನಾಗಿರುವ ಮಹಾಮಾಯಾವಿಯಾದ ನಿನ್ನನ್ನು ನಾನು ಎಲ್ಲಿ ಕಾಣುವೆನೆಂದು ಹೇಳಿ ಹೇಳಿ, ಆಕ್ರನ್ದನವಂಮಾಡಿ, ಈ ದಶಕಪಠನದಿಂದ ಇಲ್ಲಿಯೇ ಬ್ರಹ್ಮಾನನ್ದವು ಉಂಟಾಗುವುದೆಂದು ನಿರ್ಣಯಿಸಿ ಇರುತ್ತಾರೆ.

---

# ಶ್ರೀಃ

# ಅಷ್ಟಮಶತಕದಲ್ಲಿ—ಷಷ್ಠದಶಕ

## (ಎಲ್ಲಿಯುಮ್ ಕಾಲ್ಯೆಯುಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಮಲಯಾಳದೇಶದಲ್ಲಿರುವ "ತಿರುಕ್ಕಡಿತ್ತಾನಮ್" ಎಂಬ ಶ್ರೀಕಟಿಸ್ಥಲದಲ್ಲಿ ಬಿಜಯಮಾಡಿರುವ ಭಗವನ್ತನಲ್ಲಿ ಪ್ರೀತಿವಿಶಿಷ್ಟರಾಗಿ—ತದ್ಗುಣಗಳನ್ನು ವರ್ಣಿಸುತ್ತಾರೆ.)

---

(೧) ಎಲ್ಲಿಯುಮ್ ಕಾಲ್ಯೆಯುಮ್ ತನ್ನೈ ನಿನ್ನೈನ್ದೆೞ,
ನಲ್ಲವರುಳ್‌ಕಳ್ ನಮಕ್ಕೇ ತನ್ದರುಳ್‌ಶೆಯ್ವಾನ್,
ಅಲ್ಲಿಯುಮ್ ತೆಣ್ಣಾನ್ಮುೞಿಯಾ್ ಮುಡಿಯಪ್ಪನೂರ್,
ಶೆಲ್ವರ್‌ಕಳ್ ವಾೞುಮ್ ತಿರುಕ್ಕಡಿತ್ತಾನಮೇ.

ಪ್ರ॥ ಎಲ್ಲಿಯುಮ್-ರಾತ್ರಿಯಲ್ಲೂ, ಕಾಲೈಯುಮ್-ಹಗಲಿನಲ್ಲೂ, ತನ್ನೈ-ಉಪಕಾರಕನಾದ ತನ್ನನ್ನು, ನಿನೈನ್ದು ಎೞ-ಚಿನ್ತಿಸಿ ಉಜ್ಜೀವಿಸುವಂತೆ, ನಲ್ಲ ಅರುಳ್‌ಕಳ್ – ವಿಲಕ್ಷಣವಾದ ಅನುಗ್ರಹಗಳನ್ನು, ನಮಕ್ಕೇ ತನ್ದು-ನಮಗೇ ಉಂಟುಮಾಡಿ, ಅರುಳ್‌ಶೆಯ್‌ವಾ‌ನ್ – ಕೃಪೆಮಾಡುವವನಾಗಿ, ಅಲ್ಲಿ-ಪುಷ್ಪಗುಚ್ಛಗಳುಳ್ಳ, ಅಮ್ ತಣ್ಣಮ್ – ರಮ್ಯವಾಗಿಯೂ ಶೀತಳವಾಗಿಯೂ ಇರುವ, ತುೞಾಯ್-ತುಳಸೀಮಾಲೆಯನ್ನು ಧರಿಸಿ ಇರುವ, ಮುಡಿ-ಶಿರಸ್ಸುಳ್ಳ, ಅಪ್ಪ‌ನ್-ಸ್ವಾಮಿಯ, ಊರ್-ವಾಸಸ್ಥಲವು, ಶೆಲ್ವರ್‌ಕಳ್ ವಾೞುಮ್-ಭಗವತ್ಕೈಙ್ಕರ್ಯ ಸಾಮ್ರಾಜ್ಯವುಳ್ಳ ಭಾಗವತರು ಬಾಳುತ್ತಿರುವ, ತಿರುಕ್ಕಡಿತ್ತಾನಮೇ-ಶ್ರೀ ಕಟಸ್ಥಾನವೆಂಬ ದಿವ್ಯಕ್ಷೇತ್ರವೇ.

( ಸ-ಗಾ-ರ ॥ )—

ನಕ್ತನ್ದಿವಂ ಸ್ಮರತ ಮಾಮಿತಿ ಯಃ ಕೃಪಾಳು-
ರಸ್ಮಾಸು ಭಾತಿ ತುಲಸೀಕುಸುಮಾಢ್ಯಮೌಳಿಃ ।
ನಾಥಸ್ಯ ತಸ್ಯ ಪುರಮಸ್ತಿ ಕಟಸ್ಥಲಾಖ್ಯಂ
ಸ್ಥಾನಂ ಹಿ ಶೇಷಪದವೀಂ ಭಜತಾಂ ಪದಂ ತತ್ ॥

ತಾ॥ ರಾತ್ರಿಯೂ ಹಗಲೂ ತನ್ನನ್ನು ನಾವು ಚಿನ್ತಿಸಿ ಉಜ್ಜೀವಿಸುವಂತೆ ನಮಗೆ ಅನುಗ್ರಹ ಪರಂಪರೆಗಳನ್ನು ಮಾಡುತ್ತಿರುವ ದಿವ್ಯತುಲಸೀಮಾಲಾಧರನಾದ ಸ್ವಾಮಿಯ ವಾಸಸ್ಥಲವು ಶ್ರೀ ಭಗವತ್ಕೈಙ್ಕರ್ಯ ಸಾಮ್ರಾಜ್ಯ ಸಮ್ಪನ್ನರಾದ ಭಾಗವತೋತ್ತಮರು ಬಾಳುತ್ತಿರುವ ತಿರುಕ್ಕಡಿತ್ತಾನವೆಂಬ (ಶ್ರೀ ಕಟಸ್ಥಾನವೆಂಬ) ದಿವ್ಯಕ್ಷೇತ್ರವೇ.

(೨) ತಿರುಕ್ಕಡಿತ್ತಾನಮುಮೆನ್ನುಡೈ ಚ್ಚಿನ್ದೈಯುಮ್,
ಒರುಕ್ಕಡುತ್ತುಳ್ಳೇ ಯುಱೈಯುಮ್ ಪಿರಾ‌ನ್ ಕಣ್ಡೀರ್,
ಶೆರುಕ್ಕಡುತ್ತನ್ರು ತಿಕೈತ್ತವರಕ್ಕರೈ,
ಉರುಕ್ಕೆಡವಾಳಿ ಪೊೞಿನ್ದ ವೊರುವನೇ.

ಪ್ರ॥ ಶೆರು-ಯುದ್ಧದಲ್ಲಿ, ಕಡುತ್ತು-ಪರಾಕ್ರಮದ ಆಧಿಕ್ಯದಿಂದ, ಅನ್ರು-ಆ ಕಾಲದಲ್ಲಿ, ತಿಕೈತ್ತ – ಯಾರನ್ನು ಜಯಿಸೋಣವೆಂದು ಭ್ರಮಿಸಿದ, ಅರಕ್ಕರೈ-ರಾವಣಾದಿ ರಾಕ್ಷಸರನ್ನು, ಉರುಕೆಡ-ಅವರ ರೂಪವು (ಶರೀರವು) ನಷ್ಟವಾಗು

ವಂತೆ, ವಾಳಿವೊಲಿನ್ದ-ಬಾಣವರ್ಷವನ್ನು ಸುರಿಸಿದ, ಒರುವರ್ ಕಣ್ಡೀರ್-ಒಬ್ಬ ವೀರನಲ್ಲವೇ, ತಿರುಕ್ಕಡಿತ್ತಾನಮುಮ್-ಶ್ರೀ ಕಟಿಸ್ಥಾನವನ್ನೂ, ಎನ್ನುಡೈ ಶಿನ್ದೈಯುಮ್-ನನ್ನ ಮನಸ್ಸನ್ನೂ, ಒರುಕ್ಕಡುತ್ತು-ಒಂದೇ ಪಟ್ಟಾಗಿ ಹಿಡಿದು, ಉಳ್ಳೇ-ಎರಡರೊಳಗೂ, ಉತ್ತ್ರೈಯುಮ್ - ವಾಸಮಾಡುವ, ಪಿರಾ-ಮಹೋಪಕಾರಕನಾದ ಸ್ವಾಮಿಯು.

( ಸ-ಗಾ-ರ ॥ )—

ಯುದ್ಧೇ ಮಹಾಬಲಮದಾಢ್ಯಮವಶ್ಯಚಿತ್ತಾನ್
ನಿರ್ಮೂಲ್ಯ ರಾಕ್ಷಸಗಣಾನಖಿಲಾನ್ ಶರೌಘೈಃ ।
ವೀರಾಗ್ರಣೀರ್ವಸತಿ ಮೇ ಹೃದಯೇ ಕಟಿಶ್ರೀ-
ಸ್ಥಾನೇ ಚ ತುಷ್ಟಹೃದಯಸ್ಸತತಂ ಪರಾತ್ಮಾ ॥

ತಾ॥ ಯುದ್ಧದಲ್ಲಿ ಮಹಾಬಲಿಷ್ಠರಾದ ರಾವಣಾದಿ ರಾಕ್ಷಸರನ್ನು ಬಾಣವರ್ಷಗಳಿಂದ ನಾಶಮಾಡಿದ ವೀರಾಗ್ರಗಣ್ಯನೇ ಶ್ರೀ ಕಟಿಸ್ಥಾನದಲ್ಲೂ ನನ್ನ ಮನಸ್ಸಿನಲ್ಲೂ ಸ್ಥಿರವಾಗಿ ನಿಂತು ನಿತ್ಯವಾಸವಂ ಮಾಡುವ ಮಹೋಪಕಾರಕನಾದ ಸ್ವಾಮಿಯು.

(೩) ಒರುವರಿರುವರೋರ್ ಮೂವರೆನ ನಿನ್ರು,
ಉರುವುಕರನ್ದುಳ್ಳುಮ್ ತೋಱುಮ್ ತಿತ್ತಿಪ್ಪಾನ್,
ತಿರುವಮರ್ಮಾರ್ವನ್ ತಿರುಕ್ಕಡಿತ್ತಾನತ್ತೈ,
ಮರುವಿಯುತ್ತೈಕಿನ್ರ ಮಾಯಪ್ಪಿರಾನೇ.

ಪ್ರ॥ ಒರುವರ್-ಮೊದಲು ಒಬ್ಬನೇ ಆಗಿ, ಇರುವರ್-ಅನನ್ತರ ಇಬ್ಬರಾಗಿ, ಮೂವರೆನ-ತದನನ್ತರ ಮೂವರೆಂಬಂತೆ, ನಿನ್ರು-ನಿಂತು, ಓರ್ ಉರುವುಕರನ್ದು-ಅದ್ವಿತೀಯವಾದ ತನ್ನ ಶರೀರವು ತಿಳಿಯದಂತೆ ಮರೆಸಿಕೊಂಡು, ತಿರು ಅಮರ್ ಮಾರ್ವನ್-(ಅವನೇ) ಲಕ್ಷ್ಮೀದೇವಿಗೆ ವಾಸಸ್ಥಲವಾದ ವಕ್ಷಸ್ಸುಳ್ಳವನಾಗಿ, ತಿರುಕ್ಕಡಿತ್ತಾನತ್ತೈ-ಶ್ರೀ ಕಟಿಸ್ಥಾನವೆಂಬ ದಿವ್ಯಸ್ಥಲವನ್ನು, ಮರುವಿ ಉತ್ತೈಕಿನ್ರ-ಸೇರಿ ನಿತ್ಯವಾಸಮಾಡುವ, ಮಾಯಪ್ಪಿರಾನೇ - ಆಶ್ಚರ್ಯಕರನಾದ ಸ್ವಾಮಿಯೇ, ಉಳ್ಳುಮ್ ತೋಱುಮ್-ಸ್ಮರಿಸುವಾಗಲೆಲ್ಲಾ, ತಿತ್ತಿಪ್ಪಾನ್-ಮಧುರತಮ ಭೋಗ್ಯವಸ್ತುವಾಗಿದಾನೆ.

( ಸ-ಗಾ-ರ ॥ )—

ಏಕೋಽಪ್ಯಭಾವಪಿ ಚ ಯಸ್ತ್ರಯ ಇತ್ಯಪೀಹ
ಸ್ಥಿತ್ವಾ ಸ್ವಯಂ ರಹಸಿ ಗುಪ್ತತನುರ್ಬಭೌ ಸಃ ।
ಶ್ರೀವತ್ಸಲಾಞ್ಛನ ಉದಾರಮನಾಃ ಕಟಿಶ್ರೀ-
ಸ್ಥಾನೇ ಚಕಾಸ್ತಿ ಮನಸೋ ಮಧುರೋಽತ್ರ ಮಾಯಿಯಾ ॥

ತಾ॥ ಮೊದಲು ಒಬ್ಬನೇ ಆಗಿ ಅನನ್ತರ ಇಬ್ಬರಾಗಿ ಕ್ರಮೇಣ ಮೂವರಾಗಿ ರುವಂತೆ ತೋರಿ ನಿಂತು, ತನ್ನ ಅದ್ವಿತೀಯವಾದ ಶರೀರವನ್ನು ಮರೆಸಿಕೊಂಡು, ಅವನೇ ಲಕ್ಷ್ಮೀಧರವಕ್ಷಸ್ಕನಾಗಿ ಶ್ರೀ ಕಟಸ್ಥಾನವೆಂಬ ದಿವ್ಯದೇಶದಲ್ಲಿ ವಾಸ ಮಾಡುವ ಆಶ್ಚರ್ಯಕರನಾದ ಸ್ವಾಮಿಯಾಗಿ, ಸ್ಮರಿಸುವಾಗಲೆಲ್ಲಾ ಮಧುರತಮ ವಾದ ಭೋಗ್ಯವಸ್ತುವಾಗಿದಾನೆ.

(೪) ಮಾಯಪ್ಪಿರಾನೆನ ವಲ್ವಿನೈ ಮಾಯ್ನ್ದಱ,
ನೇಶತ್ತಿನಾಲ್ ನೆಞ್ಜಮ್ ನಾಡು ಕುಡಿಕೊಣ್ಡಾನ್,
ತೇಶತ್ತಮರರ್ ತಿರುಕ್ಕಡಿತ್ತಾನತ್ತೈ,
ವಾಶಪ್ಪೊೞಿಲ್ಮನ್ನು ಕೋಯಿಲ್ಕೊಣ್ಡಾನೇ.

ಪ್ರ॥ ತೇಶತ್ತು – ಮಹಾತೇಜಸ್ವಿಗಳಾದ, ಅಮರರ್ – ನಿತ್ಯಸೂರಿಗಳಿಗೆ ಪ್ರಾಪ್ಯವಾದ, ವಾಶಪ್ಪೊೞಿಲ್ಮನ್ನು – ಪರಿಮಳಭರಿತವಾದ ಉದ್ಯಾನಗಳಿಂದ ಕೂಡಿದ, ತಿರುಕ್ಕಡಿತ್ತಾನತ್ತೈ-ಶ್ರೀ ಕಟಸ್ಥಾನವನ್ನು, ಕೋಯಿಲ್ ಕೊಣ್ಡಾನೇ-ತನ್ನ ದಿವ್ಯಕ್ಷೇತ್ರವನ್ನಾಗಿ ಮಾಡಿಕೊಂಡವನೇ ಆದ, ಮಾಯಪ್ಪಿರಾನ್-ಮಾಯಾ ಚೇಷ್ಟಿತನಾದ ಸ್ವಾಮಿಯು, ಎನವಲ್ವಿನೈ – ನನ್ನ ಪ್ರಬಲವಾದ ಪಾಪವು, ಮಾಯ್ನ್ದಱ–ನಾಶವನ್ನು ಹೊಂದುವಂತೆ, ನೇಶತ್ತಿನಾಲ್-(ನನ್ನಲ್ಲಿ) ಸ್ನೇಹ ದಿಂದ, ನೆಞ್ಜಮ್-ನನ್ನ ಮನಸ್ಸೆಂಬ, ನಾಡು-ವಿಸ್ತೀರ್ಣವಾದ ದೇಶವನ್ನು, ಕುಡಿಕೊಣ್ಡಾನ್-ತನ್ನ ನಿತ್ಯವಾಸಸ್ಥಲವಾಗಿ ಮಾಡಿಕೊಂಡನು.

( ಸ-ಗಾ-ರ ॥ )—

ಶ್ರೀಸೂರಿಸೇವಿತಸುಗನ್ಧ-ಲಸತ್ಕಟಿಶ್ರೀ-
ಸ್ಥಾನೇ ವಸನ್ ಹಿ ಮಹಿತೇ ಭುವಿ ಮಾಯಿವೃತ್ತಃ ।
ದಗ್ಧೇ ಮಮಾಘನಿಚಯೇ ಮಯಿ ಸೌಹೃದಾನ್ಮೇ
ಚಿತ್ತೇ ವಿಶಾಲಭುವನೇ ಽತ್ರ ಕೃತಾಶ್ರಯೋಽಸ್ತಿ ॥

ತಾ॥ ಮಹಾ ತೇಜಸ್ವಿಗಳಾದ ನಿತ್ಯಸೂರಿಗಳಿಗೆ ಪ್ರಾಪ್ಯಸ್ಥಲವಾಗಿಯೂ, ಪರಿಮಳಭರಿತೋದ್ಯಾನ ಪರಿವೃತವಾಗಿಯೂ ಇರುವ ಶ್ರೀ ಕಟಿಸ್ಥಾನವನ್ನು ತನ್ನ ದಿವ್ಯಕ್ಷೇತ್ರವನ್ನಾಗಿ ಮಾಡಿಕೊಂಡಿರುವ ಮಾಯಾಚೇಷ್ಟಿತನಾದ ಸ್ವಾಮಿಯು ನನ್ನ ಪ್ರಬಲವಾದ ಪಾಪವು ನಷ್ಟವಾಗುವಂತೆ ನನ್ನಲ್ಲಿ ಸ್ನೇಹದಿಂದ ನನ್ನ ಮನಸ್ಸೆಂಬ ವಿಸ್ತೀರ್ಣವಾದ ಭೂಮಿಯನ್ನು ತನ್ನ ನಿತ್ಯವಾಸಸ್ಥಾನವಾಗಿ ಮಾಡಿಕೊಂಡಿದಾನೆ.

(೫೧) ಕೋಯಿಲ್‌ಕೊಣ್ಡಾನ್ ತನ್ ತಿರುಕ್ಕಡಿತ್ತಾನತ್ತೈ,
ಕೋಯಿಲ್ ಕೊಣ್ಡಾನದನೋಡುಮೆನ್ನೆಞ್ಜಕಮ್,
ಕೋಯಿಲ್‌ಕೊಳ್ ದೆಯ್‌ವಮೆಲ್ಲಾಮ್ ತೊಳ, ವೈಕುನ್ದಮ್
ಕೋಯಿಲ್‌ಕೊಣ್ಡ ಕುಡಕ್ಕೂತ್ತವಮ್ಮಾನೇ.

ಪ್ರ॥ ಕೋಯಿಲ್‌ಕೊಳ್ – ವಿಲಕ್ಷಣವಾದ ವಿಮಾನಗಳುಳ್ಳ, ದೆಯ್‌ವಮೆಲ್ಲಾಮ್ – ನಿತ್ಯಸೂರಿಗಳೆಲ್ಲರೂ, ತೊೞ – ನಮಸ್ಕರಿಸುವಂತೆ, ವೈಕುನ್ದಮ್– ಪರಮಪದವನ್ನು, ಕೋಯಿಲ್‌ಕೊಣ್ಡ – ವಾಸಸ್ಥಾನವಾಗಿ ಮಾಡಿಕೊಂಡಿರುವ, ಕುಡಕ್ಕೂತ್ತ ಅಮ್ಮಾನೇ-ಕುಂಭಲೀಲಾಲೋಲನಾದ ಸ್ವಾಮಿಯೇ (ಶ್ರೀಕೃಷ್ಣನೇ), ತಿರುಕ್ಕಡಿತ್ತಾನತ್ತೈ – ಶ್ರೀಕಟಿಸ್ಥಾನವನ್ನು, ತನ್ ಕೋಯಿಲ್ ಕೊಣ್ಡಾನ್ ತನ್ನ ದಿವ್ಯದೇಶವನ್ನಾಗಿ ಮಾಡಿಕೊಂಡವನು ; ಅದನೋಡುಮ್–ಅದರೊಡನೆ, ಎನ್ ನೆಞ್ಜಕಮ್ – ನನ್ನ ಮನಸ್ಸನ್ನೂ, ಕೋಯಿಲ್‌ಕೊಣ್ಡಾನ್–ತನ್ನ ನಿತ್ಯವಾಸಸ್ಥಲ ವಾಗಿ ಮಾಡಿಕೊಂಡನು.

( ಸ–ಗಾ–ರ ॥ )—

ದಿವ್ಯೈರ್ವಿಶಿಷ್ಟ ಸೂರಿನಿವಹೈರಖಿಲೈಶ್ಚ ಸೇವ್ಯೇ
ವೈಕುಣ್ಠದಿವ್ಯನಗರೇ ಸತತಂ ವಸನ್ ಯಃ ।
ಕೃಷ್ಣಸ್ಸ ಏವ ಘಟಲೀಲ ಇಹಾಪಿ ಭಾತಿ
ಶ್ರೀಶಃ ಕಟಿಸ್ಥಲಪುರೇ ಮಮ ಚಾತ್ರ ಚಿತ್ತೇ ॥

ತಾ॥ ವಿಲಕ್ಷಣವಿಮಾನಸಹಿತರಾದ ನಿತ್ಯಸೂರಿಗಳಿಗೆ ಸೇವ್ಯವಾದ ಪರಮ ಪದವನ್ನು ತನ್ನ ವಾಸಸ್ಥಾನವಾಗಿ ಮಾಡಿಕೊಂಡಿರುವ ಕುಂಭಲೀಲಾಲೋಲ ನಾದ ಶ್ರೀಕೃಷ್ಣನೇ ಶ್ರೀಕಟಿಸ್ಥಾನವನ್ನು ತನ್ನ ದಿವ್ಯಕ್ಷೇತ್ರವನ್ನಾಗಿ ಮಾಡಿಕೊಂಡು ನನ್ನ ಮನಸ್ಸನ್ನೂ ಕೂಡ ತನ್ನ ನಿತ್ಯವಾಸಸ್ಥಲವಾಗಿ ಮಾಡಿಕೊಂಡಿದಾನೆ.

(೬) ಕೂತ್ತವಮ್ಮಾ ಕೊಡಿಯೇನಿಡರ್ ಮುೞುವುಮ್,
ಮಾಯ್‌ತ್ತವಮ್ಮಾ ಮದುಶೂದವಮ್ಮಾನುತ್ತೈ,
ಪೂತ್ತಪೊೞಿಲ್ ತಣ್ ತಿರುಕ್ಕಡಿತ್ತಾನತ್ತೈ,
ಏತ್ತ ನಿಲ್ಲಾ ಕುಱಿಕ್ಕೊಣ್ಮಿನಿಡರೇ.

ಪ್ರ|| ಕೂತ್ತ – ದಿವ್ಯಲೀಲಾಲೋಲನಾದ, ಅಮ್ಮಾ – ಸರ್ವೇಶ್ವರನು, ಕೊಡಿಯೇ-ಮಹಾಪಾಪಿಯಾದ ನನ್ನ, ಇಡರ್-ಮನಃಕ್ಲೇಶವನ್ನು, ಮಾಯ್‌ತ್ತ-ನಾಶಪಡಿಸಿದ, ಅಮ್ಮಾ-ಸ್ವಾಮಿಯೇ, ಮದುಶೂದ ಅಮ್ಮಾ-ಮಧುವೆಂಬ ರಾಕ್ಷಸನನ್ನು ಕೊಂದ ಸ್ವಾಮಿಯು. ಉತ್ತೈ-ಅವನು ನಿತ್ಯವಾಸಮಾಡುವ, ಪೂತ್ತ ಪೊೞಿಲ್ – ವಿಕಸಿತ ಪುಷ್ಪೋದ್ಯಾನಗಳಿಂದ ಭರಿತವಾದ, ತಣ್ – ಶೀತಳವಾದ, ತಿರುಕ್ಕಡಿತ್ತಾನತ್ತೈ-ಶ್ರೀ ಕಟಿಸ್ಥಾನವನ್ನು, ಏತ್ತ-ಸ್ತೋತ್ರಮಾಡಿದ ಕ್ಷಣದಲ್ಲೇ, ಇಡರ್‌ಮುೞುವುಮ್-ಕ್ಲೇಶಗಳೆಲ್ಲಾ, ನಿಲ್ಲಾ-ನಿಲ್ಲದೆ ನಾಶವನ್ನು ಹೊಂದುವುವು. ಕುಱಿಕ್ಕೊಣ್ಮಿ-ಇದನ್ನು ಚೆನ್ನಾಗಿ ಮನಸ್ಸಿನಲ್ಲಿ ಇಟ್ಟುಕೊಳ್ಳಿರಿ.

( ಸ-ಗಾ-ರ || )—

ಲೀಲಾಪರಃ ಪ್ರಭುರಸೌ ಮಮ ಪಾಪಿನೋಽಸ್ಮಿನ್
ಚಿತ್ತೇ ವಸನ್ ವ್ಯಸನಹಾ ಮಧುಸೂದನೋ ಮೇ |
ಅತ್ರಾಸ್ತಿ ಸಸ್ಯಭರಿತೇ ಮಹಿತೇ ಕಟಿಶ್ರೀ-
ಸ್ಥಾನೇ! ಪುರಂ ತದಿದಮಸ್ತ್ವಖಿಲಾರ್ತಿಹನ್ತೃ ||

ತಾ|| ದಿವ್ಯಲೀಲಾಲೋಲನಾದ ಸರ್ವೇಶ್ವರನು ಪಾಪಿಯಾದ ನನ್ನ ಮನಃಕ್ಲೇಶವನ್ನು ನಾಶಪಡಿಸಿದ ಸ್ವಾಮಿಯೇ ಆಗಿ ಮಧುಸೂದನನಾಗಿಯೂ ಇದ್ದಾನೆ. ಅವನು ನಿತ್ಯವಾಸಮಾಡುವ ರಮ್ಯಪುಷ್ಪೋದ್ಯಾನಭರಿತವಾದ ಶ್ರೀಕಟಿಸ್ಥಾನವನ್ನು ಸ್ತೋತ್ರಮಾಡಿದ ಕ್ಷಣದಲ್ಲೇ ಮನಃಕ್ಲೇಶಗಳೆಲ್ಲಾ ನಷ್ಟವಾಗುವುವು. ಇದನ್ನು ಚೆನ್ನಾಗಿ ಮನಸ್ಸಿನಲ್ಲಿಡಿರಿ.

(೭) ಕೊಣ್ಮಿನಿಡರ್ ಕೆಡ ವುಳ್ಳತ್ತು ಕ್ಕೋವಿನ್ದನ್
ಮಣ್‌ವಿಣ್ ಮುೞುದುಮಳನ್ದ ವೊಣ್‌ತಾಮರೈ,
ಮಣ್ಣವರ್‌ತಾಮ್ ತೊೞು ವಾನವರ್‌ತಾಮ್ ವನ್ದು,
ನಣ್ಣು ತಿರುಕ್ಕಡಿತ್ತಾನ ನಕರೇ.

ಪ್ರ॥ ಕೋವಿನ್ದನ್-ಗೋವಿನ್ದನ, ಮಣ್-ಭೂಮಿಯನ್ನೂ, ವಿಣ್-ಊರ್ಧ್ವ ಲೋಕವನ್ನೂ, ಮುೞುದುಮ್-ಸಮಗ್ರವಾಗಿ, ಅಳನ್ದ-ಅಳೆದುಕೊಂಡ, ಒಣ್ ತಾಮರೈ-ರಮ್ಯವಾದ ಪಾದಾರವಿನ್ದಗಳನ್ನು, ಮಣ್ಣವರ್-ಭೂಮಿಯಲ್ಲಿರುವವರು, ತಾಮ್-ತಮಗೆ ಭೋಗ್ಯವೆಂದು ತಾವೇ, ತೊೞ-ಸೇವಿಸುತ್ತಿರಲು, ವಾನವರ್-ಪರಮಪದವಾಸಿಗಳು, ತಾಮ್-ತಾವೂ, ವನ್ದು-ಬಂದು, ನಣ್ಣು-ಆದರಿಸುವ, ತಿರುಕ್ಕಡಿತ್ತಾನ ನಕರೇ-ಶ್ರೀ ಕಟಿಸ್ಥಾನವೆಂಬ ನಗರವನ್ನೇ, ಇಡರ್‌ಕೆಡ-(ನಿಮ್ಮ) ದುಃಖವು ನಾಶಹೊಂದುವಂತೆ, ಉಳ್ಳತ್ತು-ಮನಸ್ಸಿನಲ್ಲಿ, ಕೊಣ್ಮಿನ್-ಇಟ್ಟುಕೊಳ್ಳಿರಿ.

( ಸ-ಗಾ-ರ ॥ )—

ಗೋವಿನ್ದ ಏವ ಪೃಥಿವೀಂ ಚ ದಿವಂ ಸಮಗ್ರಂ
ಪದ್ಭ್ಯಾಂ ಮಮೌ! ಭುವಿ ನೃಣಾಮಪಿ ತೌ ಹಿ ವನ್ದ್ಯೌ।
ಪಾದೌ! ದ್ಯುಲೋಕನಿಲಯೈರಪಿ ನಿತ್ಯಸೇವ್ಯಂ
ಚೇದಂ ಕಟಿಸ್ಥಲಪುರಂ ಭಜತಾರ್ತಿಶಾನ್ತ್ಯೈ ॥

ತಾ॥ ಭೂಲೋಕವನ್ನೂ ಊರ್ಧ್ವಲೋಕವನ್ನೂ ಸಮಗ್ರವಾಗಿ ಅಳೆದು ಕೊಂಡ ಗೋವಿನ್ದನ ಪಾದಾರವಿನ್ದಗಳನ್ನು ಭೂಲೋಕವಾಸಿಗಳು ಸೇವಿಸುತ್ತಿರಲು, ಪರಮಪದವಾಸಿಗಳೂ ಕೂಡ ಬಂದು ಆದರಿಸುವ ಶ್ರೀಕಟಿಸ್ಥಾನವೆಂಬ ನಗರವನ್ನೇ ನೀವು (ನಿಮ್ಮ ದುಃಖಶಾನ್ತಿಗಾಗಿ) ಮನಸ್ಸಿನಲ್ಲಿ ಇಟ್ಟುಕೊಳ್ಳಿರಿ.

(೮) ತಾನನಕರ್‌ಕಳ್ ತಲೈಚ್ಚಿಱನ್ದೆಙ್ಗುಮ್,
ವಾನಿನ್ನಿಲಮ್ ಕಡಲ್ ಮುಱ್ಱುಮೆಮ್ಮಾಯಱ್ಕೇ
ಆನವಿಡತ್ತುಮೆನ್ನೆಞ್ಜುಮ್ ತಿರುಕ್ಕಡಿ-
ತ್ತಾನನಕರುಮ್, ತನ ದಾಯಪ್ಪದಿಯೇ.

ಪ್ರ॥ ವಾನ್-ಪರಮಪದವೂ, ಇನ್ನಿಲಮ್-ಈ ಭೂಮಿಯೂ, ಕಡಲ್-ಕ್ಷೀರಾಬ್ಧಿಯೂ, ಎಙ್ಗುಮ್-ಈ ಎಲ್ಲಾ ಪ್ರದೇಶಗಳಲ್ಲೂ, ತಾನನಕರ್‌ಕಳ್-ವ್ಯಾಪಿಸಿರುವ ನಗರಗಳೂ, ಮುಱ್ಱುಮ್-ಸಮಗ್ರವಾಗಿ, ತಲೈಚ್ಚಿಱನ್ದ-ಮುಖ್ಯವಾಗಿ ಸಕಲ ಸಮೃದ್ಧಿವಿಶಿಷ್ಟವಾಗಿ, ಎಮ್‌ಮಾಯಱ್ಕೇ-ನಮ್ಮ ಮಾಯಾಚೇಷ್ಟಿತನಾದ ಸ್ವಾಮಿಗೇ, ಆನವಿಡತ್ತುಮ್-ಸೇರಿದುವುಗಳಾಗಿದ್ದಾಗ್ಯೂ, ಎನ್ನೆಞ್ಜಮ್-ನನ್ನ ಮನಸ್ಸೂ, ತಿರುಕ್ಕಡಿತ್ತಾನ ನಕರಮುಮ್-ಶ್ರೀಕಟಿಸ್ಥಾನ ನಗರವೂ, ತನ-ಅವನಿಗೆ, ದಾಯಪ್ಪದಿಯೇ ದಾಯಪ್ರಾಪ್ತವಾದ ದೇಶಗಳಾಗಿವೆ. (ಇವುಗಳನ್ನು ಬಿಟ್ಟು ಬೇರೆ ಕಡೆಗೆ ಅವನು ಹೋಗಲೇ ಕೂಡದೆಂದು ಭಾವವು.)

( ಸ-ಗಾ-ರ ‖ )—

ದಿವ್ಯಂ ಪದಂ ಚ ಪರಮಂ ಪೃಥಿವೀ ಪಯೋಧಿ-
ಸ್ಸ್ವರ್ಗಂ ಚ ಸರ್ವನಗರಾಣಿ ಚ ತತ್ರ ತತ್ರ |
ಸರ್ವೇಶ್ವರಸ್ಯ ಕಿಲ ತಸ್ಯ ಭವನ್ತಿ ಭೋಗ್ಯಾ-
ನ್ಯೇತತ್ಕಟಿಸ್ಥಲಮಿದಂ ಚ ಮನೋಽಸ್ಯ ಹಿ ಸ್ವಮ್ ‖

ತಾ‖ ಪರಮಪದವೂ ಭೂಲೋಕವೂ ಕ್ಷೀರಾಬ್ಧಿಯೂ ಮುಂತಾದ ಎಲ್ಲಾ ಪ್ರದೇಶಗಳಲ್ಲೂ ವ್ಯಾಪಿಸಿರುವ ನಗರಗಳೆಲ್ಲಾ ಸಕಲ ಸಮೃದ್ಧಿವಿಶಿಷ್ಟವಾಗಿ ನಮ್ಮ ಮಾಯಾಚೇಷ್ಟಿತನಾದ ಸ್ವಾಮಿಗೇ ಸೇರಿದುವುಗಳಾಗಿದ್ದಾಗ್ಯೂ, ನನ್ನ ಮನಸ್ಸೂ ಶ್ರೀಕಟಿಸ್ಥಾನ ನಗರವೂ ಅವನಿಗೆ ದಾಯಪ್ರಾಪ್ತವಾದ ವಾಸಸ್ಥಲಗಳಾಗಿವೆ. (ಅವನು ಇವುಗಳನ್ನು ಬಿಟ್ಟು ಬೇರೆಕಡೆ ಹೋಗಕೂಡದೆಂದು ಭಾವವು.)

(೯) ತಾಯಪ್ಪದಿಕಳ್ ತಲೈಚ್ಚಿಱನ್ದೆಙ್ಗುಮ್,
ಮಾಯತ್ತಿನಾಲ್ ಮನ್ನಿ ವೀಱ್ಱಿರುನ್ದಾನುತ್ತ,
ತೇಶತ್ತಮರರ್ ತಿರುಕ್ಕಡಿತ್ತಾನತ್ತುಳ್,
ಆಯರ್ಕ್ಕದಿಪತಿ ಯಱ್ಪುತನ್ ತಾನೇ.

ಪ್ರ‖ ತೇಶತ್ತು-ತೇಜಸ್ಸುಳ್ಳ, ಅಮರರ್ - ನಿತ್ಯಸೂರಿಗಳಿಗೆ ಪ್ರಾಪ್ಯವಾದ, ತಿರುಕ್ಕಡಿತ್ತಾನತ್ತುಳ್ - ಶ್ರೀಕಟಿಸ್ಥಾನದಲ್ಲಿ, ಉತ್ತ - ನಿತ್ಯವಾಸಮಾಡುವ, ಆಯರ್ಕ್ಕು ಅದಿಪತಿ-ಗೋಪಾಲರಿಗೆ ಅಧಿಪತಿಯಾದ, ಅಱ್ಪುತನ್ತಾನೇ-ಅದ್ಭುತ ಚೇಷ್ಟಿತನಾದ ಸ್ವಾಮಿಯೇ, ತಾಯಪ್ಪದಿಕಳ್-ದಿವ್ಯದೇಶಗಳೆಂಬ ಆಯಾ ತಿರುಪತಿಗಳಲ್ಲಿ, ಎಙ್ಗುಮ್-ಎಲ್ಲಾ ಕಡೆಗಳಲ್ಲೂ, ತಲೈಚ್ಚಿಱನ್ದು-ಮುಖ್ಯ ಪ್ರಾಶಸ್ತ್ಯವನ್ನು ಹೊಂದಿ, ಮಾಯತ್ತಿನಾಲ್ - ಆಶ್ಚರ್ಯಕರವಾದ ಕೃತ್ಯಗಳಿಂದ, ಮನ್ನಿ-ಸ್ಥಿರವಾಗಿ, ವೀಱ್ಱಿರುನ್ದ-ಬಿಜಯಮಾಡಿ ಇರುವವನು.

( ಸ-ಗಾ-ರ ‖ )—

ತೇಜಸ್ವಿಸೂರಿವರಸೇವ್ಯ-ಕಟಿಸ್ಥಲಾಖ್ಯೇ
ವಾಸೀ ಚ ಗೋಕುಲಪತಿಃ ಕಿಲ ಮಾಯಿವೃತ್ತಃ |
ಅರ್ಚಾಸ್ಥಲೇಷು ಸಕಲೇಷ್ವಪಿ ಭಾತಿ ಸೇವ್ಯ-
ಸ್ಸ್ವಾಮೀ ಮಹಾನನಿಶಮದ್ಭುತಶೀಲವೃತ್ತಃ ‖

ತಾ|| ತೇಜಸ್ವಿಗಳಾದ ನಿತ್ಯಸೂರಿಗಳಿಗೆ ಪ್ರಾಪ್ಯವಾದ ಶ್ರೀಕಟಿಸ್ಥಾನದಲ್ಲಿ ನಿತ್ಯವಾಸಮಾಡುವ ಗೋಪಾಲಕಾಧಿಪತಿಯಾದ ಅತ್ಯದ್ಭುತ ಚೇಷ್ಟಿತನಾದ ಸ್ವಾಮಿಯೇ ದಿವ್ಯದೇಶಗಳೆಂಬ ಆಯಾ ತಿರುಪತಿಗಳಲ್ಲಿ ಎಲ್ಲಾ ಕಡೆಗಳಲ್ಲೂ ಪ್ರಾಶಸ್ತ್ಯವನ್ನು ಹೊಂದಿ ಆಶ್ಚರ್ಯಕರ ಕೃತ್ಯಗಳಿಂದ ಸ್ಥಿರವಾಗಿ ಬಿಜಯಮಾಡಿ ಇರುತ್ತಾನೆ

(೧೦) ಅಱ್ಪುತನ್ ನಾರಾಯಣನರಿವಾಮನನ್,
ನಿಱ್ಪದು ಮೇವಿ ಯಿರುಪ್ಪದೆನ್ನೆಞ್ಜಕಮ್,
ನಱ್ಪುಕೞ್ ವೇದಿಯರ್ ನಾನ್ಮಱೈ ನಿನ್ಱದಿರ್,
ಕಱ್ಪಕಚ್ಚೋಲೈತ್ ತಿರುಕ್ಕಡಿತ್ತಾನಮೇ.

ಪ್ರ|| ಅಱ್ಪುತನ್-ಆಶ್ಚರ್ಯ ಚೇಷ್ಟಿತನಾಗಿಯೂ, ನಾರಾಯಣನ್-ನಾರಾಯಣ ನಾಗಿ ಚೇತನರೊಡನೆ ನಿತ್ಯಸಮ್ಬನ್ಧವುಳ್ಳವನಾಗಿಯೂ, ಅರಿ-ವಿರೋಧಿ ನಿವರ್ತಕ ನಾದ ಹರಿಯಾಗಿಯೂ, ವಾಮನನ್ - ಅರ್ಥಿಯಾಗಿ ವಾಮನರೂಪಿಯಾಗಿಯೂ, ಮೇವಿ-ಆದರದೊಡನೆ, ಇರುಪ್ಪದು-ಇರೋಣವು, ಎನ್ ನೆಞ್ಜಕಮ್-ನನ್ನ ಮನಸ್ಸಿ ನಲ್ಲಿ, ನಿಱ್ಪದು-ನಿಲ್ಲೋಣವೂ, ನಱ್ಪುಕೞ್-ಒಳ್ಳೇ ಕೀರ್ತಿಯುಳ್ಳ, ವೇದಿಯರ್-ವೈದಿಕರ, ನಾನ್ಮಱೈ-ನಾಲ್ಕು ವೇದಗಳೂ, ನಿನ್ಱು-ನಿಂತು, ಅದಿರ್-ಘೋಷಿಸು ತ್ತಿರುವ, ಕಱ್ಪಕಚ್ಚೋಲೈ-ಕಲ್ಪವೃಕ್ಷಗಳುಳ್ಳ, ತಿರುಕ್ಕಡಿತ್ತಾನಮೇ - ಶ್ರೀಕಟಿ ಸ್ಥಾನದಲ್ಲೂ (ಇರೋಣವು).

( ಸ-ಗಾ-ರ || )—

ನಾರಾಯಣೋಽದ್ಭುತಚರಿತ್ರ ಇಹಾಸ್ತಿ ವಿಷ್ಣು-
ಶ್ರೀವಾಮನೋ ಹರಿರಸೌ ಮಮ ಹೃತ್ಸರೋಜೇ |
ತಿಷ್ಠತ್ಯಸೌ ಶ್ರುತಿಚತುಷ್ಟಯವಿದ್ವರೇಣ್ಯೈ-
ಸ್ಸೇವ್ಯೇ ಕಟಿಸ್ಥಲಪುರೇ ಕಿಲ ಕಲ್ಪಕಾಢ್ಯೇ ||

ತಾ|| ಆಶ್ಚರ್ಯ ಚೇಷ್ಟಿತನಾಗಿಯೂ, ನಾರಾಯಣನಾಗಿ ನಿತ್ಯ ಸಮ್ಬನ್ಧವುಳ್ಳವ ನಾಗಿಯೂ, ವಿರೋಧಿ ನಿವರ್ತಕನಾದ ಹರಿಯಾಗಿಯೂ, ಅರ್ಥಿಯಾಗಿ ವಾಮನ ರೂಪಿಯಾಗಿಯೂ, ಆದರದೊಡನೆ ಭಗವನ್ತನು ನಿಂತಿರುವ ಸ್ಥಾನಗಳು ಎರಡೇ— ಅವನಿಗೆ ನನ್ನ ಮನಸ್ಸು ಒಂದು ಸ್ಥಾನವು ; ನಾಲ್ಕು ವೇದಗಳನ್ನು ವೈದಿಕರು ಉದ್ಘೋಷಿಸುತ್ತಿರುವ ದಿವ್ಯಕಲ್ಪಕ ಶೋಭಿತವಾದ ಶ್ರೀಕಟಿಸ್ಥಾನವು ಮತ್ತೊಂದು ಸ್ಥಾನವು.

(೧೧) ಶೋಲ್ಲೈತ್ತಿರುಕ್ಕಡಿತ್ತಾನತ್ತುತ್ತೈ ತಿರು,
ಮಾಲ್ಯೈ, ಮದಿಳ್ ಕುರುಕೂರ್ ಚ್ಚಡಕೋಪನ್ ಶೊಲ್,
ಪಾಲೋಡಮುದನ್ನ ವಾಯಿರತ್ತಿಪ್ಪತ್ತುಮ್,
ಮೇಲ್ಯೈ ವೈಕುನ್ದತ್ತಿರುತ್ತುಮ್ ವಿಯನ್ದೇ

ಪ್ರ॥ ಶೋಲ್ಯೈ-ವೃಕ್ಷಸಮೂಹಗಳುಳ್ಳ, ತಿರುಕ್ಕಡಿತ್ತಾನತ್ತು-ಶ್ರೀಕಟಿಸ್ಥಾನದಲ್ಲಿ ವಾಸಮಾಡುತ್ತಿರುವ, ತಿರುಮಾಲ್ಯೈ-ಶ್ರಿಯಃಪತಿಯನ್ನು ಕುರಿತು, ಮದಿಳ್-ಪ್ರಾಕಾರಗಳುಳ್ಳ, ಕುರುಕೂರ್-ಶ್ರೀ ಕುರುಕಾಪುರಿಯ, ಶಡಕೋಪನ್-ಶ್ರೀ ಶಠಾರಿ ಮುನಿಯು, ಶೊಲ್-ಸ್ತೋತ್ರಮಾಡಲು ರಚಿಸಿದ, ಪಾಲೋಡು ಅಮುದು ಅನ್ನ-ಹಾಲಿನೊಡನೆ ಕೂಡಿದ ಅಮೃತದಂತೆ ಇರುವ, ಆಯಿರತ್ತು-ಸಹಸ್ರ ಪದ್ಯಮಾಲೆಯೊಳು, ಇಪ್ಪತ್ತುಮ್-ಈ ದಶಕವು, ಮೇಲ್ಯೈ-ಊರ್ಧ್ವಲೋಕವಾದ, ವೈಕುನ್ದತ್ತು-ಪರಮಪದದಲ್ಲಿ, ವಿಯನ್ದು - ಸನ್ತೋಷದೊಡನೆ, ಇರುತ್ತುಮ್ - ಇರುವಂತೆ ಮಾಡುವುದು.

( ಸ-ಗಾ-ರ ॥ ) —

ವೃಕ್ಷಾದಿಸಸ್ಯಭರಿತೇ ಮಹಿತೇ ಕಟಿಶ್ರೀ-
ಸ್ಥಾನೇ ರಮಾಪತಿಮಿಮಂ ಕುರುಕಾಪುರೀಶಃ ।
ಸ್ತೋತುಂ ಸಹಸ್ರಮಕರೋಚ್ಛಠಜಿತ್ಸುಧಾರ್ದ್ರೇ
ತತ್ರೇದಮಸ್ತಿ ದಶಕಂ ದಿವಿ ವಾಸಮೂಲಮ್ ॥

ತಾ॥ ವೃಕ್ಷಸಮೂಹ ಭರಿತವಾದ ಶ್ರೀಕಟಿಸ್ಥಾನದಲ್ಲಿ ವಾಸಮಾಡುತ್ತಿರುವ ಶ್ರಿಯಃಪತಿಯನ್ನು ಸ್ತೋತ್ರಮಾಡುವುದಕ್ಕಾಗಿ ಪ್ರಾಕಾರ ಪರಿವೃತವಾದ ಶ್ರೀ ಕುರುಕಾಪುರಿಯ ಶಠಾರಿಮುನಿಯು ರಚಿಸಿದ (ಹಾಲಿನೊಡನೆ ಕೂಡಿದ ಅಮೃತದಂತೆ) ಭೋಗ್ಯತಮವಾದ ಸಹಸ್ರಪದ್ಯಮಾಲೆಯೊಳು ಈ ದಶಕವು ಪಠನಮಾಡುವವರಿಗೆ ಪರಮಪದದಲ್ಲಿ ಸನ್ತೋಷದೊಡನೆ ನಿತ್ಯವಾಸವನ್ನು ಉಂಟುಮಾಡುವುದು.

( ದ್ರ-ಉ-ಸಂ ॥ )

ಸದ್ಯಸ್ಸ್ವಸಙ್ಗಮಕೃತೌ ಭವಿತಾ ನ ಸಾತ್ಮ್ಯಾ
ಪ್ರೀತಿಸ್ಸಮೇತಿ ಹರಿರಾಪ್ತುಮನಾಶ್ಶನೈರ್ಮಾಮ್ ।
ವೈಕುಣ್ಠತೋಽಧಿಗತವಾನ್ ಮತಿಮಿತ್ಯವನ್ಯಾಂ
ಸ್ಥಾನೇ ಕ್ವಚಿದ್ಬಹುಮತಿಂ ವಿದಧೇ ಸ ಷಷ್ಠೇ ॥

( ದ್ರ–ಉ–ತಾ–ರ || )—

ಭಾತತ್ವಾಚ್ಛ್ರೀತುಲಸ್ಯಾಶ್ರಿತಹೃದಿ ಶಯನಾಚ್ಛ್ರೀದ್ಧವಕ್ಷಸ್ಕಭಾವಾ-
ದಾಶ್ವರ್ಯೋಪಕ್ರಿಯತ್ವಾತ್ಸುರಗಣಭಜನಾದ್ವೈರಿವಿಧ್ವಂಸಕತ್ವಾತ್ |
ಗೋವಿನ್ದತ್ವಾದಶೇಷಾಭಿನುತವಿಷಯತೋ ಽಭೀಷ್ಟಸಚ್ಚಿತ್ತಕತ್ವಾತ್
ಸರ್ವಾಕಾರಾದ್ಭುತತ್ವಾತ್ ಸ್ವಪದವಿತರಣೇ ಸಜ್ಜ ಇತ್ಯಾಹ ಕೃಷ್ಣಃ ||

(ಈ ಷಷ್ಠದಶಕದ ಸಾರಾಂಶ—)

ಈ ಆರನೆಯ ದಶಕದಲ್ಲಿ—ಶ್ರೀಶಠಾರಿಮುನಿವರ್ಯರು (ತಿರುಕ್ಕಡಿತ್ತಾನಮ್-ಎಂಬ) ಶ್ರೀಕಟಿಸ್ಥಾನವೆಂಬ ದಿವ್ಯಕ್ಷೇತ್ರದಲ್ಲಿ ನಿತ್ಯವಾಸಮಾಡುವ ಸ್ವಾಮಿಯಲ್ಲಿ ಅತ್ಯನ್ತ ಪ್ರೀತಿವಿಶಿಷ್ಟರಾಗಿ, ಆಕ್ಷೇತ್ರವೇ ಭಾಗವತೋತ್ತಮರ ವಾಸಸ್ಥಲವೆಂತಲೂ, ಅಲ್ಲಿಯೂ ತಮ್ಮ ಮನಸ್ಸಿನಲ್ಲೂ ರಾಕ್ಷಸಧ್ವಂಸಕನಾದ ವೀರಾಗ್ರಗಣ್ಯನು ನಿತ್ಯವಾಸಮಾಡುತ್ತಿದ್ದಾನೆಂತಲೂ, ಅವನೇ ಒಬ್ಬನಾಗಿಯೂ ಇಬ್ಬರಾಗಿಯೂ ಮೂವರಾಗಿಯೂ ನಿಂತು ಆ ದಿವ್ಯದೇಶದಲ್ಲಿ ಭೋಗ್ಯತಮನಾಗಿದ್ದಾನೆಂತಲೂ, ಅವನೇ ಪಾಪನಾಶಕನೆಂತಲೂ, ಕುಂಭಲೀಲಾಲೋಲನಾದ ಶ್ರೀ ಕೃಷ್ಣನೆಂತಲೂ, ಮಧುಸೂದನನೆಂತಲೂ, ತ್ರಿವಿಕ್ರಮನೆಂತಲೂ, ಅವನಿಗೆ ತಮ್ಮ ಮನಸ್ಸೂ ಶ್ರೀ ಕಟಿಸ್ಥಾನವೂ ದಾಯಪ್ರಾಪ್ತವಾದ ಎರಡುಸ್ಥಾನಗಳೆಂತಲೂ, ಅವನೇ ಅದ್ಭುತಚೇಷ್ಟಿತನಾದ ನಾರಾಯಣ – ಹರಿ – ವಾಮನಾತ್ಮಕನೆಂತಲೂ ವರ್ಣಿಸಿ—ಈ ದಶಕದ ಪಠನದಿಂದ ಪರಮಪದದಲ್ಲಿ ನಿತ್ಯಾನನ್ದದೊಡನೆ ವಾಸವುಂಟಾಗುವುದೆಂದು ಫಲವನ್ನೂ ಸೂಚಿಸಿ ಇರುತ್ತಾರೆ.

---

## ಶ್ರೀಃ

## ಅಷ್ಟಮಶತಕದಲ್ಲಿ—ಸಪ್ತಮದಶಕ

(ಇರುತ್ತುವಾ ಪಿಯಾನ್ದ—)

(ಈ ದಶಕದಲ್ಲಿ— ಶ್ರೀ ಶಠಾರಿಮುನಿವರ್ಯರು ಶ್ರೀ ಭಗವನ್ತನಿಂದ ಉಂಟುಮಾಡಲ್ಪಟ್ಟ ಆನನ್ದಾನುಭವದಿಂದ ವಿಸ್ಮಿತರಾಗಿ ಅತ್ಯನ್ತ ಸನ್ತುಷ್ಟರಾಗುತ್ತಾರೆ.)

---

(೧) ಇರುತ್ತುವಾ ಪಿಯಾನ್ದೆನ್ನೈ ತ್ತನ್ಪೊನ್ನಡಿಕ್ಕೀಳ್ ಸ್ಟ್,
ಆರುತ್ತಿತ್ತನೈತ್ತೋರ್ ಪಲನಾಳತ್ತಿತ್ತೇಲ್ಕ
ಪೊರುತ್ತಮುಡೈ ವಾಮನನ್ ತಾನ್ಪುಕುನ್ದ, ಎನ್ತನ್
ಕರುತ್ತೈಯುಱ ವೀರ್ತಿರುನ್ದಾನ್ ಕಣ್ಡುಕೊಣ್ಡೇ.

ಪ್ರ॥ ಎನ್ನೈ-ನನ್ನನ್ನು, ವಿಯನ್ದು-ವಿಸ್ಮಯಪಟ್ಟು, ತನ್ ಪೊನ್ನಡಿಕ್ಕೀೞ್-ತನ್ನ ರಮ್ಯವಾದ ಪಾದಗಳ ಕೆಳಗೆ, ಇರುತ್ತುವಮ್ ಎನ್ಱು-ಇರಿಸುವನೆಂದು, ಅರುತ್ತಿತ್ತು-ಪ್ರಾರ್ಥಿಸಿ, ಎನ್ಱೈತ್ತೋರ್-ಅನೇಕಕಾಲ, ಪಲನಾಳ್-ಬಹುದಿನಗಳವರೆಗೆ (ಪ್ರತಿದಿನವೂ), ಅೞೈತ್ತೇಱ್ಕು-ಕರೆದ ನನಗೆ, ತಾನ್-ತಾನು, ಪೊರುತ್ತಮುಡೈ-ಪ್ರಾವಣ್ಯವುಳ್ಳ, ವಾಮನನ್-ವಾಮನನಾಗಿ, ಪುಕುನ್ದು-ಪ್ರವೇಶಿಸಿ, ಎನ್ ತನ್-ನನ್ನ, ಕರುತ್ತೈ-ಮನಸ್ಸಿನಲ್ಲಿ, ಉಱ-ಆದರದೊಡನೆ ಸ್ಥಿರವಾಗಿರುವಂತೆ, ಕಣ್ದುಕೊಣ್ದು-ಚೆನ್ನಾಗಿ ನೋಡಿಕೊಂಡು, ವೀಱ್ಱಿರುನ್ದಾನ್-ಬಿಜಯಮಾಡಿ ಇದ್ದನು.

( ಸ–ಗಾ–ರ ॥ )—

ವಿಸ್ಮಿತ್ಯ ಮಾಂ ಸ್ವಚರಣಾಮ್ಬುಜಯೋಃ ಕರೋಮಿ-
ತ್ಯಭ್ಯರ್ಥ್ಯ ತಂ ಸುಚಿರಮೇವ ಕಿಲಾಹ್ವಯಾಮಿ ।
ಸೋಽಯಂ ಪ್ರವಿಶ್ಯ ಹೃದಯೇ ಮಮ ವಾಮನೋಽದ್ಯ
ಪ್ರೀತ್ಯಾ ಚಕಾಸ್ತಿ ನನು ಸನ್ತತಸಾಕ್ಷಿಭೂತಃ ॥

ತಾ॥ ವಿಸ್ಮಯದೊಡನೆ ನನ್ನನ್ನು ತನ್ನ ರಮ್ಯವಾದ ಪಾದಗಳ ಕೆಳಗೆ ಇರಿಸುವನೆಂದು ನಾನು ಪ್ರಾರ್ಥಿಸಿ, ಅನೇಕಕಾಲ ಪ್ರತಿದಿನವೂ ಅವನನ್ನು ಕರೆದುದರಿಂದ— ಅವನು ಪ್ರಾವಣ್ಯದಿಂದ ವಾಮನರೂಪಿಯಾಗಿ ಬಂದು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತಿರುವಂತೆ ಪೂರ್ಣಾವಲೋಕನದಿಂದ ಬಿಜಯಮಾಡಿ ಇದ್ದನು.

(೨) ಇರುನ್ದಾನ್ ಕಣ್ದುಕೊಣ್ದೆನದೇೞೈ ನೆಞ್ಜಾಳುಮ್,
ತಿರುನ್ದಾದವೋರ್ಐವರೈ ತ್ತೇಯ್ನ್ದಱ ಮನ್ನಿ,
ಪೆರುನ್ದಾಳ್ ಕಳಿಱ್ಱುಕ್ಕರುಳ್ಶೆಯ್ದ ಪೆರುಮಾನ್,
ತರುಮ್ ತಾನರುಳ್ತಾನಿನಿ ಯಾನಱಿಯೇನೇ.

ಪ್ರ॥ ಎನದು-ನನ್ನ, ಏೞೈನೆಞ್ಜು-ಚಪಲವಾದ ಚಿತ್ತವನ್ನು, ಆಳುಮ್-ಆಳುವ, ತಿರುನ್ದಾದ-ವಶ್ಯವಾಗದ, ಓರ್ ಐವರೈ-ಅದ್ವಿತೀಯವಾದ ಐದು ಇನ್ದ್ರಿಯಗಳನ್ನೂ, ತೇಯ್ನ್ದು ಅಱ-ಚೆನ್ನಾಗಿ ನಾಶಪಡಿಸುವಂತೆ, ಮನ್ನಿ-ಸ್ಥಿರವಾಗಿ ಮನಸ್ಸಿನಲ್ಲಿ ನಿಂತು, ಕಣ್ದುಕೊಣ್ದು-ಕಾದುಕೊಂಡು ನೋಡುತ್ತಿದ್ದು, ಇರುನ್ದಾನ್-ಚಲಿಸದೆ ಇದ್ದವನು, ಪೆರುಮ್ ತಾಳ್-ದೊಡ್ಡ ಕಾಲುಗಳುಳ್ಳ, ಕಳಿಱ್ಱುಕ್ಕು-ಆನೆಗೆ (ಗಜೇನ್ದ್ರನಿಗೆ), ಅರುಳ್ ಶೆಯ್ದ-ಕೃಪೆಮಾಡಿದ, ಪೆರುಮಾನ್-ಸರ್ವೇಶ್ವರನು, ತಾನ್-ತಾನೇ, ತರುಮ್-ಆ ಗಜೇನ್ದ್ರನಿಗೆ ಮಾಡಿದ, ಅರುಳ್ ತಾನ್-ಉಪಕಾರವನ್ನೂ, ಇನಿ-ನನಗೆ ಮಾಡಿದ ಉಪಕಾರವನ್ನು ಸ್ಮರಿಸಿದಮೇಲೆ, ಯಾನ್ ಅಱಿಯೇನ್-ನಾನು ಒಂದು ಉಪಕಾರವೆಂದು ಭಾವಿಸುವುದಿಲ್ಲ.

( ಸ–ಗಾ–ರ ॥ )—

ಮಚ್ಚಿತ್ತಶಾಸನಪರಾಣ್ಯಪಿ ಚೇನ್ದ್ರಿಯಾಣಿ
ದುರ್ನಿಗ್ರಹಾಣ್ಯಪಿ ನಿಗೃಹ್ಯ ಚ ಸಾಕ್ಷಿಭೂತಃ ।
ನಾಥೋ ಮಹಾದ್ವಿಪವರೇಽತಿದಯಾಳುರಾಸೀ-
ದಿತ್ಯೇಷದತ್ರ ನ ಕಿಲಾದ್ಭುತಮದ್ಯ ಭಾತಿ ॥

ತಾ॥ ನನ್ನ ಚಪಲವಾದ ಚಿತ್ತವನ್ನು ಆಳುವ ದುರ್ನಿಗ್ರಹವಾದ ಪಂಚೇನ್ದ್ರಿಯಗಳನ್ನು ವಶೀಕರಿಸಿ ಅವುಗಳ ಚೇಷ್ಟೆಗಳು ನಷ್ಟವಾಗುವಂತೆ ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತು ಚಲಿಸದೆ ಇರುವವನು ನನಗೆ ಮಾಡಿದ ಉಪಕಾರವನ್ನು ಸ್ಮರಿಸಿದ ಮೇಲೆ, ಅವನು ಗಜೇನ್ದ್ರನಿಗೆ ಮಾಡಿದ ಉಪಕಾರವು ಒಂದು ಉಪಕಾರವೆಂದೇ ನಾನು ಭಾವಿಸಲಾರೆನು.

(೩) ಅರುಳ್ತಾನಿನಿ ಯಾನಱಿಯೇನವನೆನ್ನುಳ್,
ಇರುಳ್ ತಾನಱ ವೀಱ್ಱಿರುನ್ದಾನಿದುವಲ್ಲಾಲ್,
ಪೊರುಳ್ ತಾನೆನಿಲ್ ಮೂವುಲಕುಮ್ ಪೊರುಳಲ್ಲ,
ಮರುಳ್ ತಾನೀದೋ ಮಾಯಮಯಕ್ಕು ಮಯಕ್ಕೇ.

ಪ್ರ॥ ಅವನ್– ಆ ಸರ್ವೇಶ್ವರನು, ಎನ್ ಉಳ್–ನನ್ನ ಮನಸ್ಸಿನಲ್ಲಿ ಇರುವ, ಇರುಳ್ ತಾನ್– ಅಜ್ಞಾನಾದ್ಯನ್ಧಕಾರವೆಲ್ಲಾ, ಅಱ– ನಷ್ಟವಾಗುವಂತೆ, ವೀಱ್ಱಿರುನ್ದಾನ್–ಬಿಜಯಮಾಡಿ ಇದ್ದನು. (ಅವನಿಗೆ) ಇದು ಅಲ್ಲಾಲ್– ಈ ಸ್ಥಿತಿಯನ್ನು ಹೊರತು, ಪೊರುಳ್ತಾನ್ – ಬೇರೆ ಪುರುಷಾರ್ಥವು, ಎನಿಲ್– ಉಂಟೋ ಎಂದರೆ, ಮೂವುಲಕುಮ್–ತ್ರಿವಿಧ ಚಿದಚಿಚ್ಛೇಷತ್ವವೂ, ಪೊರುಳಲ್ಲ – ಒಂದು ವಸ್ತುವೇ ಅಲ್ಲ. ಇನಿ–ಹೀಗಾದಮೇಲೆ (ಇದನ್ನು) ಅರುಳ್ತಾನ್–ಒಂದು ಉಪಕಾರವೆಂದು, ಯಾನ್ ಅಱಿಯೇನ್ – ನಾನು ಭಾವಿಸುವುದಿಲ್ಲ. ಈದು ತಾನ್--ಇದೂ, ಮರುಳೋ– (ನನ್ನ) ಭ್ರಾನ್ತಿಯೋ ; (ಅವನು ತಾನೇ) ಮಾಯ–ಆಶ್ಚರ್ಯಕರವಾದ, ಮಯಕ್ಕು–ವಿಸ್ಮಯಚೇಷ್ಟಿತಗಳಿಂದ, ಮಯಕ್ಕೇ–ಭ್ರಮಜನಕನಾಗಿದಾನೆಯೋ ?

( ಸ–ಗಾ–ರ ॥ )—

ನಾಥಸ್ಸ ಏವ ಹೃದಿ ಮೇಽಸ್ತಿ ತಮಃಪ್ರಹಸ್ತಾ
ನಾನ್ಯತ್ಫಲಂ ಭವತಿ ಚಾತ್ರ ಜಗತ್ತ್ರಯಂ ಚ ।
ನೈವಾಸ್ತಿ ತತ್ಫಲಮಹೋ! ಕರುಣಾ ಕಿ ಮೇಷಾ ?
ಕಿಂ ಮೋಹ ಏವ? ಕಿಮು ಮಾಯಿನ ಏವ ಮಾಯಾ ? ॥

ತಾ॥ ಆ ಸರ್ವೇಶ್ವರನು ನನ್ನ ಮನಸ್ಸಿನಲ್ಲಿರುವ ಅಜ್ಞಾನಾದ್ಯನ್ಧಕಾರವೆಲ್ಲಾ ನಷ್ಟವಾಗುವಂತೆ ಬಿಜಯಮಾಡಿ ಇದ್ದನು. ಅವನಿಗೆ ಈ ಸ್ಥಿತಿಯನ್ನು ಹೊರತು ಬೇರೆ ಪುರುಷಾರ್ಥವುಂಟೋ ? — ಎಂದರೆ ತ್ರೈಲೋಕ್ಯಶೇಷತ್ವವೂ ಅವನಿಗೆ ಒಂದು ವಸ್ತುವೇ ಅಲ್ಲ. ಹೀಗಿರುವಲ್ಲಿ ಇದನ್ನು ಅವನಿಗೆ ಉಪಕಾರವೆಂದು ನಾನು ಭಾವಿಸುವುದಿಲ್ಲ. ಇದು ನನ್ನ ಭ್ರಾನ್ತಿಯೋ ? ಅವನ ಮಾಯಾಚೇಷ್ಟಿತ ಗಳಿಂದ ಉಂಟಾದ ಭ್ರಾನ್ತಿಯೋ ?

(೪) ಮಾಯಮಯಕ್ಕು ಮಯಕ್ಕಾನೆನ್ನೈ ವಞ್ಜಿತ್ತು,
ಆಯನಮರರ್ಕ್ಕರಿಯೇಱನದಮ್ಮಾ೯,
ತೂಯ ಶುಡರ್ಚ್ಚೋದಿ ತ್ತನದೆನ್ನುಳ್ ವೈತ್ತಾ೯,
ತೇಶಮ್ ತಿಕೞುಮ್ ತ೯ತಿರುವರುಳ್ ಶೆಯ್ದೇ.

ಪ್ರ॥ ಆಯ೯-ಕೃಷ್ಣನು, ಅಮರರ್ಕ್ಕು-ನಿತ್ಯಸೂರಿಗಳಿಗೆ, ಅರಿಯೇಱು-ಶಿಖರಪ್ರಾಯನಾಗಿ, ಎನದು ಅಮ್ಮಾ೯ - ನನ್ನ ಸ್ವಾಮಿಯಾದವನು, ತೇಶಮ್ ತಿಕೞುಮ್-ತೇಜಃಪ್ರಕಾಶವುಳ್ಳ, ತ೯ ತಿರುವರುಳ್ ಶೆಯ್ದೇ-ತನ್ನ ಕೃಪೆಯನ್ನು ಮಾಡಿಯೇ, ತನದು-ತನ್ನ, ತೂಯ ಶುಡರ್ಶೋದಿ-ನಿರ್ಮಲವಾಗಿ ಅತ್ಯುಜ್ಜ್ವಲ ವಾದ ತೇಜೋಮಯ ವಿಗ್ರಹವನ್ನು, ಎನ್ನುಳ್-ನನ್ನ ಮನಸ್ಸಿನಲ್ಲಿ, ವೈತ್ತಾ೯-ಸ್ಥಿರವಾಗಿ ಪ್ರತಿಷ್ಠಾಪಿಸಿ ಇದಾನೆ. (ಆದುದರಿಂದ) ಎನ್ನೈವಞ್ಜಿತ್ತು-ನನ್ನನ್ನು ವಂಚಿಸಿ, ಮಾಯಮಯಕ್ಕು - ತನ್ನ ಮಾಯಾಚೇಷ್ಟಿತಗಳಿಂದ, ಮಯಕ್ಕಾ೯-ನನ್ನನ್ನು ಭ್ರಮಿಸುವಂತೆ ಮಾಡಲಾರನು.

( ಸಂ-ಗ್ರಾ-ರ ॥ )—

ಗೋಪಾಲಕೋ ಮಮ ವಿಭುಃ ಕಿಲ ಸೂರಿನಾಥಃ
ಕೃಷ್ಣೋಽದ್ಯ ಭಾಸ್ವರದಯಾನಿಧಿರುಜ್ಜ್ವಲಂ ತಮ್ ।
ಸ್ವಂ ವಿಗ್ರಹನ್ತು ವಿಮಲಂ ಹೃದಿ ಮೇ ನಿವೇಶ್ಯ
ಶ್ರೀಶೋ ನ ವಞ್ಚಯತಿ ಮಾಮಿಹ ಮೋಹಯೇತ್ ಕಿಮ್ ? ॥

ತಾ॥ ಗೋಪಾಲಕುಲತಿಲಕನಾದ ಶ್ರೀಕೃಷ್ಣನು ನಿತ್ಯಸೂರಿಗಳಿಗೆ ಶಿಖರ ಪ್ರಾಯನಾಗಿ ನನ್ನ ಸ್ವಾಮಿಯಾದವನು ತೇಜಃಪ್ರಕಾಶವುಳ್ಳ ತನ್ನ ಕೃಪೆಯಿಂದಲೇ ನಿರ್ಮಲವಾದ ತನ್ನ ಅತ್ಯುಜ್ಜ್ವಲ ದಿವ್ಯತೇಜೋಮಯ ವಿಗ್ರಹವನ್ನು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ಸ್ಥಾಪಿಸಿ ಇದಾನೆ. ಆದುದರಿಂದ ಅವನು ನನ್ನನ್ನು ವಂಚಿಸಿ ತನ್ನ ಮಾಯಾಚೇಷ್ಟಿತಗಳಿಂದ ಭ್ರಮಿಸುವಂತೆ ಮಾಡಲಾರನು.

(೫) ತಿಕಳುವನ್ ತನ್ದಿರುವರುಳ್ ಶೆಯ್‌ದುಲಕತ್ತಾರ್,
ಪುಕಳುವನ್ ಪುಕಳ್ ತಾನದು ಕಾಟ್ಟಿತ್ತನ್ನು, ಎನ್ನುಳ್
ತಿಕಳುವನ್ ಮಣಿಕ್ಕುನ್ನಮೊನ್ರು ಒತ್ತು ನಿನ್ರಾನ್,
ಪುಕಳುವನ್ ಪುಕಳ್ ಮತ್ತೆನಕ್ಕುಮೋರ್ ಪೊರುಳೇ.

ಪ್ರ|| ತಿಕಳುವನ್ – ಪ್ರಕಾಶಿಸುವ, ತನ್ ತಿರುವರುಳ್‌ಶೆಯ್‌ದು–ತನ್ನ ಕೃಪೆಯನ್ನು ಮಾಡಿ, ಉಲಕತ್ತಾರ್–ಲೋಕದವರು, ಪುಕಳುವನ್–ಇದನ್ನು ಕಂಡು ಸ್ತೋತ್ರಮಾಡುವ, ಅದು ಪುಕಳು–ಆ ಪ್ರಸಿದ್ಧವಾದ ಕೀರ್ತಿಯನ್ನೂ, ತಾನ್ ಕಾಟ್ಟಿತನ್ದು–ತಾನೇ ನನಗೆ ತೋರಿಸಿ ಪ್ರಕಾಶಪಡಿಸಿ, ಎನ್ನುಳ್–ನನ್ನೊಳು, ತಿಕಳುವನ್–ಪ್ರಕಾಶಿಸುವ, ಒನ್ರು–ಒಂದು, ಮಣಿಕ್ಕುನ್ನಮ್ ಒತ್ತು ನಿನ್ರಾನ್–ಮಾಣಿಕ್ಯ ಪರ್ವತಕ್ಕೆ ಸದೃಶನಾಗಿ ನಿಂತನು. ಎನಕ್ಕು–ನನಗೆ, ಮತ್ತು – (ಇದನ್ನು ಬಿಟ್ಟು) ಬೇರೆ, ಪುಕಳುವನ್–ಅವನನ್ನು ಸ್ತೋತ್ರಮಾಡುವ, ಪುಕಳುಮ್–ಸ್ತೋತ್ರವೂ, ಓರ್. ಪೊರುಳೇ–ಒಂದು ವಸ್ತುವೇ ?

( ಸ–ಗಾ–ರ || ) —

ಕೃತ್ವಾ ಪ್ರಸಾದಮಿಹ ಮಯ್ಯಪಿ ಚ ಸ್ವಕೀರ್ತಿಂ
ಪ್ರಖ್ಯಾಪಿತಾಂ ಜಗತಿ ಮೇ ನನು ಸಮ್ಪ್ರಕಾಶ್ಯ |
ಮಯ್ಯೇವ ಭಾತಿ ಮಣಿಪರ್ವತ ಸನ್ನಿಭೋಽಸೌ
ಕಿಂ ತಸ್ಯ ಕೀರ್ತಿಮತುಲಾಮಪಿ ಕೀರ್ತಯೇಯಮ್ ? ||

ತಾ|| ತೇಜಃಪ್ರಕಾಶವುಳ್ಳ ಅವನ ಕೃಪೆಯನ್ನು ಲೋಕದವರು ಕಂಡು ಸ್ತೋತ್ರಮಾಡುವ ಮಹಾ ಪ್ರಸಿದ್ಧವಾದ ಕೀರ್ತಿಯನ್ನೂ ತಾನೇ ನನಗೆ ತೋರಿಸಿ, ನನ್ನೊಳಗೆ ಪ್ರಕಾಶಿಸುವ ಒಂದು ಮಾಣಿಕ್ಯಪರ್ವತದಂತೆ ಅವನು ನಿಂತಿದಾನೆ. ನನಗೆ ಇದನ್ನು ಬಿಟ್ಟು ಬೇರೆ ಒಂದು ವಿಧವಾದ ಸ್ತೋತ್ರಪ್ರಕಾರವೇ ಇಲ್ಲವೆಂದು ತೋರಿ ಇದೆ. (ಅವನ ಈ ಮಹಾಗುಣಕ್ಕಿಂತ ಬೇರೆ ಶ್ರೇಷ್ಠವಾದ ಒಂದು ಗುಣವುಂಟೇ ?—ಎಂದು ಭಾವವು.)

(೬) ಪೊರುಳ್ ಮತ್ತೆನಕ್ಕುಮೋರ್ ಪೊರುಳ್‌ತನ್ನಿಲ್ ತೀರ್‌ಕ್ಕ
ತ್ತರುಮೇಲ್, ಪಿನ್ನೈಯಾರ್‌ಕ್ಕವನ್ ತನ್ನೈ ಕೊಡುಕ್ಕುಮಾ,
ಕರುಮಾಣಿಕ್ಕಕ್ಕುನ್ರತ್ತು ತಾಮರೈಪೋಲ್,
ತಿರುಮಾರ್ಬು ಕಾಲ್‌ಕಣ್‌ಕೈ ಶೆವ್ವಾಯುನ್ದಿಯಾನೇ.

ಪ್ರ॥ ಕರುಮಾಣಿಕ್ಕ ಕುನ್ಱತ್ತು–ನೀಲಮಾಣಿಕ್ಯ ಪರ್ವತದಮೇಲೆ, ತಾಮರೆ ಪೋಲ್–ತಾವರೆ ಪುಷ್ಪಗಳ ಮಹಾವನವು ಅಲರಿದಂತೆ ರಮ್ಯವಾಗಿ ಪ್ರಕಾಶಿಸುವ, ತಿರುಮಾರ್ಬು–ವಕ್ಷಸ್ಸ್ಥಲವನ್ನೂ, ಕಾಲ್‌ಕಣ್‌ಕೈ–ಪಾದನೇತ್ರ ಹಸ್ತಗಳನ್ನೂ, ಶೆವ್ವಾಯ್ – ಬಿಂಬಾಧರವನ್ನೂ, ಉನ್ದಿಯಾನೇ – ನಾಭಿಪದ್ಮವನ್ನೂ ಉಳ್ಳ ಸ್ವಾಮಿಯೇ, ಮಱ್ಱು ಪೊರುಳ್ ತನ್ನಿಲ್–ಬೇರೆ ಪುರುಷಾರ್ಥಗಳಲ್ಲಿ, ಎನಕ್ಕುಮ್ ಓರ್‌ಪೊರುಳ್–ನನಗೂ ಒಂದು ಪುರುಷಾರ್ಥವನ್ನು, ಶೀರ್‌ಕ್ಕ ತರುಮೇಲ್–ಶ್ಲಾಘ್ಯ ವಾಗಿ ಕೊಡುವ ಪಕ್ಷದಲ್ಲಿ, ಪಿನ್ನೈ ಅರ್ವ–ತದನನ್ತರ ಅವನು, ತನ್ನೈ–ತನ್ನನ್ನು, ಆರ್‌ಕ್ಕು ಕೊಡುಕ್ಕುಮ್–ಇನ್ನು ಯಾರಿಗೆ ಕೊಡುವನು ?

( ಸ–ಗಾ–ರ ॥ )—

ಮಾಣಿಕ್ಯಭೂಭೃದುಪರಿ ಪ್ರತತಾಮ್ಬುಜಾಭಾ-
ನ್ಯಸ್ಯಾಂಘ್ರಿ–ನೇತ್ರ–ಕರ–ಹೃದ್ವದನಾನಿ ನಾಭಿಃ ।
ಮಹ್ಯಂ ಚ ಕಿಞ್ಚಿದಿಹ ವಸ್ತು ದದಾತಿ ಚೇತ್ಸ-
ಸ್ವಾತ್ಮಾನಮೇವ ವಿತರೇದ್ಬತ ! ತರ್ಹಿ ಕಸ್ಮೈ ! ॥

ತಾ॥ ನೀಲಮಾಣಿಕ್ಯ ಪರ್ವತದಮೇಲೆ ಕಮಲವನವುವಿಕಸಿತವಾದಂತೆ ಇರುವ ವಕ್ಷಸ್ಸ್ಥಲವನ್ನೂ ಪಾದನೇತ್ರಹಸ್ತಗಳನ್ನೂ ಬಿಂಬಾಧರವನ್ನೂ ನಾಭಿ ಪದ್ಮವನ್ನೂ ಉಳ್ಳ ಸ್ವಾಮಿಯೇ ತನ್ನನ್ನು ಬಿಟ್ಟು ಬೇರೆ ಶ್ಲಾಘ್ಯವಾದ ಒಂದು ಪುರುಷಾರ್ಥವನ್ನು ನನಗೆ ಕೊಡುವ ಪಕ್ಷದಲ್ಲಿ ಸರ್ವೋತ್ಕೃಷ್ಟನಾದ ತನ್ನನ್ನು ಇನ್ನು ಯಾರಿಗೆ ಕೊಡುವನು ? (ನನ್ನಲ್ಲಿ ಪ್ರೀತ್ಯತಿಶಯದಿಂದಲೇ ತನ್ನನ್ನು ನನಗೆ ತಂದನೆಂದು ಭಾವವು.)

(೭) ಶೆವ್ವಾಯುನ್ದಿ ವೆಣ್‌ಪಲ್ ಶುಡರ್‌ಕ್ಕುೞೈ, ತನ್ನೊಡೇ
ಡೆವ್ವಾಯ್‌ಚ್ಚುಡರುಮ್ ತಮ್ಮಿಲ್ ಮುಱ್ಱವಳಾಯ್‌ಕ್ಕೊಳ್ಳ,
ಶೆವ್ವಾಯ್ ಮುಱುವಲೋಡೆನದುಳ್ಳತ್ತಿರುನ್ದ,
ಅವ್ವಾಯನ್ಱಿ ಯಾನಱಿಯೇನ್ ಮಱ್ಱರುಳೇ

ಪ್ರ॥ ಶೆವ್ವಾಯ್–ಕೆಂಪಾದ ಬಾಯಿಯೂ, ಶೆಮ್ ಉನ್ದಿ–ಕೆಂಪಾದ ನಾಭಿಯೂ, ವೆಣ್‌ಪಲ್ – ಬಿಳುಪಾದ ಹಲ್ಲುಗಳೂ, ಶುಡರ್‌ಕುೞೈ – ಪ್ರಕಾಶಮಾನವಾದ ಕಿವಿಗಳೂ, ತನ್ನೊಡುಮ್–ಇವುಗಳೊಡನೆ ಕೂಡ, ಎವ್ವಾಯ್–ಎಲ್ಲಾ ಅವಯವ ಗಳ, ಶುಡರುಮ್–ಕಾನ್ತಿಯೂ, ತಮ್ಮಿಲ್ ಮುಱ್ಱ–ತಮ್ಮೊಳಗೆ ತಾವೇ ಮುಂದಾಗಿ,

ವಳಾಯ್‌ಕೊಳ್ಳ–ಸುತ್ತಿಬರಲು, ಶಿವ್ವಾಯ್–ಬಿಂಬಾಧರದ, ಮುಱುವಲೋಡು–ಮನ್ದಹಾಸದೊಡನೆ, ಎನದು ಉಳ್ಳತ್ತು– ನನ್ನ ಮನಸ್ಸಿನಲ್ಲಿ, ಇರುನ್ದ–ಇದ್ದ, ಅವ್ವಾಯ್–ಆ ಪ್ರಕಾರವನ್ನು, ಅನ್ಱಿ–ಹೊರತು, ಮಱ್ಱು ಅರುಳ್–ಬೇರೇ ಆಕಾರವನ್ನು, ಯಾಂ ಅಱಿಯೇಂ–ನಾನು ಕಾಣೆನು (ನಾನು ಭಾವಿಸಲಾರೆನು.)

( ಸ–ಗಾ–ರ ॥ )—

ವಕ್ತ್ರಾಮ್ಬುಜಂ ದಶನಕುಟ್ಮಲ–ನಾಭಿಪದ್ಮಂ
ತೇಜಸ್ವಿ ಚ ಶ್ರವಣಯುಗ್ಮಮಿಹಾಸ್ಯಶೋಭಾ |
ಸರ್ವತ್ರ ಚಾಪ್ಯಹಮಮುಂ ತ್ವಿತಿ ಭಾತಿ! ಸೋಽಯಮ್
ಮನ್ದಸ್ಮಿತೈರ್ಹೃದಿ ಮಮಾಸ್ತಿ! ನ ವೇದ್ಮಿ ಚಾನ್ಯತ್ ॥

ತಾ॥ ಅವನ ಕೆಂಪಾದಬಾಯಿ, ಕೆಂಪಾದ ನಾಭಿಪದ್ಮ, ಬಿಳುಪಾದ ಹಲ್ಲುಗಳು, ಪ್ರಕಾಶಮಾನವಾದ ಕಿವಿಗಳು—ಇವುಗಳೆಲ್ಲಾ ಸೇರಿ ಸರ್ವಾವಯವಗಳ ಕಾನ್ತಿಗಳೂ ತಾವಾಗಿಯೇ ಮುಂದೆ ಬಂದು ಸುತ್ತಿ ಸುತ್ತಿ ಬಿಂಬಾಧರದ ಮನ್ದಹಾಸದೊಡನೆ ನನ್ನ ಮನಸ್ಸಿನಲ್ಲಿ ನಿಂತಿರುವ ಆ ಪ್ರಕಾರವನ್ನು ಹೊರತು ನಾನು ಬೇರೆ ಆಕಾರವನ್ನು ಭಾವಿಸಲಾರೆನು. (ಆ ಪ್ರಕಾರವೇ ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತಿದೆ—ಎಂದು ಭಾವವು.)

(೮) ಅಱಿಯೇಂ ಮಱ್ಱರುಳೆನ್ನೈ ಯಾಳುಮ್ ಪಿರಾನಾರ್,
ವೆಱಿದೇ ಯರುಳ್‌ಶೆಯ್‌ವರ್ ಶೆಯ್‌ವಾರ್‌ಕಳ್ಕುಕನ್ದು,
ಶಿಱಿಯೇನುಡೈ ಚ್ಚಿನ್ದೈಯುಳ್ ಮೂವುಲಕುಮ್, ತನ್
ನೆಱಿಯಾ ವಯಿಱ್ಱಿಲ್‌ಕೊಣ್ಡು ನಿನ್‌ಱೊಳಿನ್ದಾರೇ.

ಪ್ರ॥ ಮಱ್ಱು–ಬೇರೆ ಒಂದನ್ನೂ, ಅರುಳ್–ಉಪಕಾರವಾಗಿ, ಅಱಿಯೇಂ, ನಾನು ಭಾವಿಸಲಾರೆನು; ಎನ್ನೈ ಆಳುಮ್–ನನ್ನನ್ನು ಆಳುವ, ಪಿರಾನಾರ್–ಮಹೋಪಕಾರಕನಾದ ಸ್ವಾಮಿಯು, ಶೆಯ್‌ವಾರ್‌ಕಳ್ಕು–ಉಪಕಾರಮಾಡುವವರಿಗೆ, ವೆಱಿದೇ–ನಿಷ್ಕಾರಣವಾಗಿ, ಉಕನ್ದು–ಸನ್ತೋಷದೊಡನೆ, ಅರುಳ್ ಶೆಯ್‌ವರ್–ಕೃಪೆಮಾಡುವನು. (ಹೇಗೆಂದರೆ) ಶಿಱಿಯೇನುಡೈ–ಅಲ್ಪನಾದ ನನ್ನ, ಶಿನ್ದೈಯುಳ್–ಮನಸ್ಸಿನಲ್ಲಿ, ಮೂವುಲಕುಮ್–ಮೂರುಲೋಕಗಳನ್ನೂ, ನೆಱಿಯಾ–ಕ್ರಮವಾಗಿ, ತನ್ ವಯಿಱ್ಱಿಲ್–ತನ್ನ ಉದರದಲ್ಲಿ, ಕೊಣ್ಡು–ಇಟ್ಟುಕೊಂಡು, ನಿನ್ಱು ಒಳಿನ್ದಾರೇ–ನಿಂತುಬಿಟ್ಟನು.

( ಸ-ಗಾ-ರ || )—

ನಾನ್ಯೋಽಪಕಾರವಿದಹಃ! ಮಯಿ ದಾಸ್ಯಭಾಗ್ಯಂ
ವಿನ್ಯಸ್ಯ ಭಾತ್ಯುಪಕೃತಿಂ ಸ್ವಯಮೇವ ಕುರ್ವನ್ |
ಅವ್ಯಾಜಮೇಷ ಪರಮೋ ಹೃದಿ ಮೇ ಸ್ಥಿತೋಽದ್ಯ
ತ್ರೈಲೋಕ್ಯಮಪ್ಯುದರತಸ್ಸ್ವಯಮೇವ ಧೃತ್ವಾ ||

ತಾ|| ಬೇರೆ ಒಂದನ್ನೂ ನಾನು ಉಪಕಾರವೆಂದು ಭಾವಿಸಲಾರೆನು—ನನ್ನನ್ನು ಆಳುವ ಮಹೋಪಕಾರಕನಾದ ಸ್ವಾಮಿಯು ಉಪಕಾರಮಾಡುವ ಜನರಿಗೆ ನಿರ್ಹೇತುಕವಾಗಿ ಸನ್ತೋಷದೊಡನೆ ಕೃಪೆಮಾಡುವನು. ಹೇಗೆಂದರೆ—ಅಲ್ಪನಾದ ನನ್ನ ಮನಸ್ಸಿನಲ್ಲಿ ಅನ್ತಹ ಸರ್ವೇಶ್ವರನು ತ್ರೈಲೋಕ್ಯವನ್ನೂ ತನ್ನ ಉದರದಲ್ಲಿ ಇಟ್ಟುಕೊಂಡೇ ನಿಂತುಬಿಟ್ಟನು.

(೯) ವಯಿತ್ರಿಲ್ ಕೊಣ್ಡು ನಿನ್ರೊಳಿನ್ದಾರುಮ್ ಯವರುಮ್
ವಯಿತ್ರಿಲ್ ಕೊಣ್ಡು ನಿನ್ರೊರು ಮೂವುಲಕುಮ್ ತಮ್
ವಯಿತ್ರಿಲ್ ಕೊಣ್ಡು ನಿನ್ರ ವಣ್ಣಮ್ ನಿನ್ರ ಮಾಲೈ,
ವಯಿತ್ರಿಲ್ ಕೊಣ್ಡು ಮನ್ನವೈತ್ತೇನ್ ಮದಿಯಾಲೇ.

ಪ್ರ|| ವಯಿತ್ರಿಲ್ ಕೊಣ್ಡು ನಿನ್ರು ಒಳಿನ್ದಾರುಮ್ - (ತಾಯಿಯು ಮಕ್ಕಳನ್ನು ಉದರದಲ್ಲಿಟ್ಟು ರಕ್ಷಿಸುವಂತೆ) ಪ್ರಜೆಗಳನ್ನು ರಕ್ಷಿಸುವ ರಾಜರನ್ನು ಯವರುಮ್-ಅವರಿಗಿಂತಲೂ ಶ್ರೇಷ್ಠರಾದ ಬ್ರಹ್ಮಾದಿದೇವತೆಗಳನ್ನೂ, ವಯಿತ್ರಿಲ್-ತನ್ನ ಸ್ವರೂಪೈಕದೇಶದಲ್ಲಿ, ಕೊಣ್ಡುನಿನ್ರು-ಇಟ್ಟುಕೊಂಡುನಿಂತು, ಒರುಮೂವುಲಕುಮ್ – ಅದ್ವಿತೀಯವಾದ ತ್ರೈಲೋಕ್ಯವನ್ನೂ, ತಮ್‌ವಯಿತ್ರಿಲ್‌ಕೊಣ್ಡು – ತನ್ನ ಸಙ್ಕಲ್ಪದಿಂದಲೇ ತನ್ನಲ್ಲಿಧರಿಸಿ, ನಿನ್ರವಣ್ಣಮ್ – ನಿಂತರೀತಿಯಲ್ಲೇ, ನಿನ್ರ ಮಾಲೈ-ನಿಂತಿರುವ ಸರ್ವೇಶ್ವರನನ್ನು, ಮದಿಯಾಲೇ– ಅನುಮತಿಯಿಂದ, ವಯಿತ್ರಿಲ್‌ಕೊಣ್ಡು-ನನ್ನ ಮನಸ್ಸಿನಲ್ಲಿ ಧರಿಸಿಕೊಂಡು, ಮನ್ನವೈತ್ತೇನ್ – ಸ್ಥಿರವಾಗಿರುವಂತೆ (ಚಲಿಸದಂತೆ) ಇಟ್ಟುಕೊಂಡೆನು.

( ಸ-ಗಾ-ರ || )—

ಭೂಪಾಲಕಾನಪಿ ಸುರಾನ್ ಜಠರೇ ದಧಾನಂ
ತ್ರೈಲೋಕ್ಯಮಪ್ಯುದರತಸ್ಸ್ವಯಮೇವ ಧೃತ್ವಾ |
ಸರ್ವೇಶ್ವರಂ ಸ್ಥಿತಿಯುತಂ ಚ ಯಥಾವದೇಷಂ
ಚಿತ್ತೇ ನಿಜೇ ಕಿಲ ಸದಾಽಪಿ ನಿವೇಶಯಾಮಿ ||

ತಾ॥ ಪ್ರಜೆಗಳನ್ನು ರಕ್ಷಿಸುವ ರಾಜರನ್ನೂ ಬ್ರಹ್ಮಾದಿ ದೇವತೆಗಳನ್ನೂ ತನ್ನ ಸ್ವರೂಪೈಕದೇಶದಲ್ಲಿಟ್ಟುಕೊಂಡು, ತ್ರೈಲೋಕ್ಯವನ್ನೂ ತನ್ನ ಸಙ್ಕಲ್ಪದಿಂದಲೇ ಧರಿಸಿ, ಏಕರೀತಿಯಲ್ಲೇ ನಿಂತಿರುವ ಸರ್ವೇಶ್ವರನನ್ನು—ನಾನು ಅನುಮತಿಯಿಂದ (ಅವನ ಇಷ್ಟಾನುಸಾರವಾಗಿ) ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ಪ್ರತಿಷ್ಠಾಪಿಸಿ ಇರುತ್ತೇನೆ.

(೧೦) ವೈತ್ತೇನ್ ಮದಿಯಾಲೆನದುಳ್ಳತ್ತಕತ್ತೇ,
ಎಯ್ತ್ತೇ ಯೊಳಿವೇನಲ್ಲೇನ್ಱು ಮೆಪ್ಪೋದುಮ್,
ಮೊಯ್ತ್ತೇಯ್ ತಿರೈ ಮೋದು ತಣ್ ಪಾಱ್ಕಡಲುಳಾಲ್,
ವೈತ್ತೇಯ್‌ಶುಡರ್ ಪ್ಪಾಮ್ಬಣೈ ನಮ್‌ಪರನ್ನೈಯೇ.

ಪ್ರ॥ ಮೊಯ್‌ತ್ತು – ಹೊಂದಿ ಸೇರಿಕೊಂಡು, ಏಯ್ – (ಆದಿಶೇಷನಿಗೆ) ತಕ್ಕಂತೆ, ತಿರೈಮೋದು—ಅಲೆಗಳು ಚಲಿಸುತ್ತಿರುವ, ತಣ್—ಶ್ರಮಹರವಾದ, ಪಾಱ್ಕಡಲುಳಾಲ್—ಕ್ಷೀರಾಬ್ಧಿಯಲ್ಲೇ, ಪೈತ್ತು—ವಿಕಸಿತ ಫಣೆಗಳುಳ್ಳವನಾಗಿ, ಏಯ್—ಸ್ವಾಭಾವಿಕವಾದ, ಶುಡರ್—ತೇಜಸ್ಸುಳ್ಳ, ಪಾಮ್ಬು—ಆದಿಶೇಷನನ್ನು, ಅಣೈ—ಶಯನವಾಗಿ ಉಳ್ಳ, ನಮ್‌ಪರನ್ನೈಯೇ—ನಮ್ಮ ಸ್ವಾಮಿಯನ್ನೇ, ಮದಿಯಾಲ್—ನನ್ನ ಅನುಮತಿಯಿಂದ, ಎನದು ಉಳ್ಳತ್ತಕತ್ತೇ – ನನ್ನ ಮನಸ್ಸಿನೊಳಗೆ, ವೈತ್ತೇನ್—ಇಟ್ಟೆನು. ಎನ್ನುಮ್—ಎಲ್ಲಾ ದಿವಸಗಳಲ್ಲೂ, ಎಪ್ಪೋದುಮ್—ಯಾವಾಗಲೂ, ಎಯ್ತ್ತೇ ಒಳಿವೇನಲ್ಲೇನ್—ಇನ್ನುಮೇಲೆ (ಎಂದಿಗೂ) ಬಿಟ್ಟು ಇರಲಾರೆನು.

( ಸ-ಗಾ-ರ ॥ )—

ಉದ್ಯತ್ತರಙ್ಗಭರಿತೇಽಪಿ ಚ ದುಗ್ಧಸಿನ್ಧೌ
ತೇಜಸ್ವಿನಿ ಸ್ವಶಯನೇ ಶಯಿತಂ ಫಣೀನ್ದ್ರೇ ।
ನಾಥಂ ಪರಂ ಮಮ ಕಿಲಾಕರವಂ ಸ್ವಚಿತ್ತೇ !
ವಿಶ್ಲೇಷಮೇವ ನ ಸಹೇಽಹಮಿತಃ ಕದಾಽಪಿ ॥

ತಾ॥ ಶ್ರಮಹರವಾದ ತರಂಗಗಳಿಂದ ಕೂಡಿದ ಕ್ಷೀರಾಬ್ಧಿಯಲ್ಲಿ ವಿಕಸಿತ ಫಣೆಗಳುಳ್ಳ ತೇಜಸ್ವಿಯಾದ ಆದಿಶೇಷನಲ್ಲಿ ಶಯನಮಾಡಿರುವ ನಮ್ಮ ಸ್ವಾಮಿಯನ್ನೇ ನಾನು ಅನುಮತಿಯಿಂದ ನನ್ನ ಮನಸ್ಸಿನೊಳಗೆ ಇಟ್ಟೆನು. ಇನ್ನುಮೇಲೆ— ಎಂದಿಗೂ ನಾನು ಅವನನ್ನು ಬಿಟ್ಟು ಇರಲಾರೆನು.

(೧೧) ಶುಡರ್‌ಪ್ಪಾಮ್ಬಣೈ ನಮ್‌ಪರನೈ ತ್ತಿರುಮಾಲೈ,
ಅಡಿಚ್ಚೇರ್ ವಣ್ಣ ವಣ್ ಕುರುಕೂರ್ ಚ್ಚಡಕೋಪನ್,
ಮುಡಿಪ್ಪಾನ್ ಶೊನ್ನ ವಾಯಿರತ್ತಿಪ್ಪತ್ತುಮ್ ಶನ್ಮಮ್
ವಿಡ, ತ್ತೇಯನ್ದು ನೋಕ್ಕುಮ್ ತನ್ ಕಣ್‌ಕಳ್ ಶಿವನ್ದೇ.

ಪ್ರ॥ ಶುಡರ್–ಕಾನ್ತಿಯುಳ್ಳ, ಪಾಮ್ಬು–ಆದಿಶೇಷನನ್ನು, ಅಣೈ–ಶಯನವಾಗಿ ಉಳ್ಳ, ನಮ್ ಪರನೈ–ನಮ್ಮ ಸ್ವಾಮಿಯನ್ನು, ತಿರುಮಾಲೈ–ಲಕ್ಷ್ಮೀನಾಥನನ್ನು, ಅಡಿ–ಪಾದಗಳಲ್ಲಿ, ಶೇರ್‌ವಣ್ಣ–ಸೇರುವ ಪ್ರಕಾರವನ್ನು, ಮುಡಿಪ್ಪಾನ್–ನಿರ್ವಹಿಸುವುದಕ್ಕಾಗಿ, ವಣ್ ಕುರುಕೂರ್–ಸಮೃದ್ಧಿಶಿಷ್ಟವಾದ ಕುರುಕಾಪುರಿಯ, ಶಡಕೋಪನ್–ಶಠಾರಿಮುನಿಯು, ಶೊನ್ನ – ಸ್ತೋತ್ರಮಾಡುವುದಕ್ಕೆ ರಚಿಸಿದ, ಆಯಿರತ್ತು – ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್ – ಈ ದಶಕವು, ಶನ್ಮಮ್ – ಜನ್ಮವು, ಅಱತ್ತೇಯ್‌ನ್ದು–ಅತ್ಯನ್ತ ಕ್ಷೀಣವಾಗಿ, ವಿಡ–ನಾಶಹೊಂದುವಂತೆ, ತನ ಕಣ್‌ಕಳ್ ಶಿವನ್ದೇ–ತನ್ನ ಕಣ್ಣುಗಳು ಕೆಂಪಾಗಿ ತೀವ್ರದೃಷ್ಟಿಯಿಂದ, ನೋಕ್ಕುಮ್–ನೋಡುವುದು. (ಜನ್ಮವನ್ನು ನಾಶಪಡಿಸುವ ದೃಷ್ಟಿವಿಷವೆಂದು ಭಾವವು).

(ಸ–ಗಾ–ರ ॥ )—

ತೇಜಸ್ವಿ ಶೇಷಶಯನಂ ಪರಮಂ ಪ್ರಭುಂ ನಃ
ಶ್ರೀಶಂ ಹಿ ದಾಸ್ಯವಿಧಯೇಽಂಘ್ರಿಯುಗೇ ಶಠಾರಿಃ ।
ಸ್ತೋತುಂ ಸಹಸ್ರಮಕರೋದ್ದಶಕಂ ತದೇತ–
ತ್ತೀವ್ರಾಕ್ಷಿತೋ ದಹತಿ ಜನ್ಮಮಹಾಘತೂಲಮ್ ॥

ತಾ॥ ಕಾನ್ತಿಯುಳ್ಳ ಆದಿಶೇಷನನ್ನು ಶಯನವಾಗಿ ಮಾಡಿಕೊಂಡಿರುವ ನಮ್ಮ ಸ್ವಾಮಿಯಾದ ಲಕ್ಷ್ಮೀನಾಥನನ್ನು (ಅವನ ಪಾದಗಳಲ್ಲಿ ಸೇರಿರುವುದಕ್ಕಾಗಿ) ಸ್ತುತಿಸಲು ಶ್ರೀ ಕುರುಕಾಪುರಿಯ ಶಠಾರಿಮುನಿಯು ರಚಿಸಿದ ಸಹಸ್ರಪದ್ಯಮಾಲೆಯೊಳು, ಈ ದಶಕವು ಜನ್ಮರೂಪವಾದ ಸಂಸಾರವನ್ನು ತೀವ್ರದೃಷ್ಟಿಯಿಂದ ನೋಡಿ ಧ್ವಂಸಮಾಡುವುದು.

( ದ್ರು–ಉ–ಸಂ ॥ )—

ಮದ್ವಿಪ್ರಯೋಗಮಸಹನ್ ಸ್ವಯಮೇವ ಚಾರ್ಥೀ
ಮಾಮಲ್ಪಕೈಕನಿಲಯಂ ಬಹುಮನ್ಯಮಾನಃ ।
ಶೌರಿಸ್ಸಮಾಶ್ಲಿಷದಿದಂ ಮತಿವಿಭ್ರಮಃ ಕಿ–
ಮಿತ್ಯಾತ್ಮನೋ ಮುದಮಭಾಷತ ಸಪ್ತಮೇನ ॥

( ದ್ರ-ಉ-ತಾ-ರ ॥ )—
ಭವ್ಯತ್ವಾದ್ರಕ್ಷಕತ್ವಾತ್ತ್ರಿಜಗದಧಿಕಕಾರುಣ್ಯತೋ ಗೋಪಭಾವಾ-
ನ್ನೀಲಾಶ್ಮಾದ್ರಿಪ್ರಭತ್ವಾತ್ ಸ್ವಜನಿಕೃತನಿಜಾತ್ಮಪ್ರದಾನಪ್ರಭುತ್ವಾತ್ |
ಮನ್ವಸ್ಮಿತ್ವಾ ಸ್ಥಿತತ್ವಾದ್ಧೃದಿ ಸುಕೃತಿಷು ಚಾತರ್ಕಿತಾನುಗ್ರಹತ್ವಾತ್
ಸ್ವಾನಾಂ ಚಿತ್ತಾನಪಾಯಾತ್ ಸ್ವಜನಹೃದಿ ರತೋ ಮಾಧವಶ್ಚೇತ್ಯವೋಚತ್॥

(ಈ ಸಪ್ತಮದಶಕದ ಸಾರಾಂಶ—)

ಈ ಏಳನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವದನುಭವದಲ್ಲಿ ಮಗ್ನರಾಗಿ, ವಾಮನಾವತಾರ-ಗಜೇನ್ದ್ರವರದ-ಅನ್ತರ್ಯಾಮಿ-ಗೋಪಾಲಕೃಷ್ಣ-ನೀಲಮಣಿಪರ್ವತ ಸದೃಶ - ಕ್ಷೀರಾಬ್ಧಿ ಶೇಷಶಾಯಿ—ಇತ್ಯಾದಿ ರೂಪಗಳನ್ನು ಸ್ಮರಿಸಿ, ತಮ್ಮಲ್ಲಿ ಅವನ ಪ್ರೀತ್ಯತಿಶಯವನ್ನೂ ತಮ್ಮ ಮನಸ್ಸಿನಲ್ಲಿ ಅವನು ಸ್ಥಿರವಾಗಿ ನಿಂತಿರುವ ಪ್ರಕಾರಗಳನ್ನೂ ವರ್ಣಿಸಿ, ಈ ದಶಕದ ಪಠನದಿಂದ ಸಂಸಾರಬನ್ಧ ನಿವೃತ್ತಿಯಾಗುವುದೆಂದು ಫಲವನ್ನೂ ಸೂಚಿಸಿ ಇರುತ್ತಾರೆ.

—:❖:—

ಶ್ರೀಃ

## ಅಷ್ಟಮಶತಕದಲ್ಲಿ—ಅಷ್ಟಮದಶಕ.

(ಕಣ್‌ಕಳ್‌ಶಿವನ್ದು—)

(ಈ ದಶಕದಲ್ಲಿ—ಶ್ರಿಯಃಪತಿಯ ಸರ್ವಸ್ವಾಮಿತ್ವವು ವರ್ಣಿತವಾಗಿದೆ. ಈ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರ ತೃತೀಯಮೋಹವು ವ್ಯಕ್ತವಾಗಿದೆ.)

---

(೧) ಕಣ್‌ಕಳ್‌ಶಿವನ್ದು ಪೆರಿಯವಾಯ್ ವಾಯುಮ್ ಶಿವನ್ದು
ಕನಿನ್ದುಳ್ಳೇ,
ವೆಣ್‌ಪಲ್ಲಿಲಕು ಶುಡರಿಲಕು ವಿಲಕುಮಕರಕುಣ್ಡಲತ್ತನ್,
ಕೊಣ್ಡಲ್‌ವಣ್ಣನ್ ಶುಡರ್‌ಮುಡಿಯನ್ ನಾನ್ಗುತೋಳ್‌ಕ
ಕುನಿಶಾರ್ಙ್ಗನ್,
ಒಣ್‌ಶಙ್ಗಗದೈ ವಾಳಾಳಿಯಾನೊರುವನಡಿಯೇನುಳ್ಳಾನೇ.

ಪ್ರ|| ಕಣ್‌ಕಳ್‌ಶಿವನ್ದು – ಕಣ್ಣುಗಳು ಕೆಂಪಾಗಿ, ಪೆರಿಯ ಆಯ್–ದೊಡ್ಡದಾಗಿ, ವಾಯುಮ್ ಶಿವನ್ದು–ಬಾಯಿಯೂ ಕೆಂಪಾಗಿ, ಕನಿನ್ದು–ಪಕ್ವಫಲದಂತೆ ಆಗಿ, ಉಳ್ಳೇ–ಒಳಗೆ, ವೆಣ್ ಪಲ್–ಬಿಳೀ ಹಲ್ಲುಗಳ, ಇಲಕು ಶುಡರ್–ಪ್ರಕಾಶಮಾನವಾದ ಕಾನ್ತಿಯನ್ನೂ ಉಳ್ಳವನಾಗಿ, ಇಲಕು–ಪ್ರಕಾಶಿಸುವ, ವಿಲಕು-ಚಲಿಸುತ್ತಿರುವ, ಮಕರಕ್ಕುಣ್ಡಲತ್ತ–ಮಕರಕುಣ್ಡಲಗಳುಳ್ಳವನಾಗಿ, ಕೊಣ್ಡಲ್ ವಣ್ಣ–ನೀಲಮೇಘವರ್ಣನಾಗಿಯೂ, ಶುಡರ್‌ಮುಡಿಯ–ಉಜ್ಜ್ವಲವಾದ ಕಿರೀಟವುಳ್ಳವನಾಗಿಯೂ, ನಾನ್ಗುತೋಳ – ಚತುರ್ಭುಜಗಳುಳ್ಳವನಾಗಿಯೂ, ಕುನಿಶಾರ್ಙ್ಗಮ್–ಬಗ್ಗಿರುವ ಧನುಸ್ಸೂ, ಒಣ್‌ಶಙ್ಗು – ರಮ್ಯವಾದ ಶಙ್ಖವೂ, ಗದೈ–ಗದೆಯೂ, ವಾಳ್–ಖಡ್ಗವೂ, ಆಳಿಯಾ–ಚಕ್ರವೂ ಇವುಗಳನ್ನೆಲ್ಲಾ ಧರಿಸಿರುವ, ಒರುವ – ಅದ್ವಿತೀಯನಾಗಿ ಇರುವವನೇ, ಅಡಿಯೇನುಳ್ಳಾ–ನನ್ನ ಮನಸ್ಸಿನಲ್ಲಿ ಪ್ರಕಾಶಿಸುತ್ತಿದಾನೆ.

( ಸ–ಗಾ–ರ || )—

ದಿವ್ಯಾಬ್ಜಾಯಿತಲೋಚನಶ್ಚ ವಿಲಸದ್ದನ್ತಶ್ಚ ವಕ್ತ್ರಾಮ್ಬುಜೇ
ಶ್ರೋತ್ರದ್ವನ್ದ್ವವಿಲೋಲಕುಣ್ಡಲಯುಗೋ ನೀಲಾಮ್ಬುದಾಭೋ ಹರಿಃ|
ಶ್ರೀಮಾ ಭಾಸ್ವರರತ್ನಮೌಳಿರಸಮೋ ವಿಷ್ಣುಶ್ಚತುರ್ಬಾಹುಧೃ-
ಚ್ಚಕ್ರೀ ಶಾರ್ಙ್ಗಗದಾಸಿಶಙ್ಖಭೃದಸೌ ಬಾಭಾತಿ ಚಿತ್ತೇ ಮಮ ||

ತಾ|| ಕೆಂಪಾದ ಕಣ್ಣುಗಳನ್ನೂ, ಬಿಂಬಾಧರವನ್ನೂ, ಶುಭ್ರದನ್ತಕಾನ್ತಿಯನ್ನೂ ಉಳ್ಳವನಾಗಿ, ಚಲಿಸುತ್ತಿರುವ ಮಕರಕುಣ್ಡಲಗಳುಳ್ಳವನಾಗಿ, ನೀಲಮೇಘವರ್ಣನಾಗಿಯೂ, ಉಜ್ಜ್ವಲ ಕಿರೀಟಧಾರಿಯಾಗಿಯೂ, ಚತುರ್ಭುಜನಾಗಿಯೂ, ಶಙ್ಖಚಕ್ರಗದಾಸಿ ಶಾರ್ಙ್ಗಧರನಾಗಿಯೂ ಇರುವ ಅದ್ವಿತೀಯನಾದ ಸ್ವಾಮಿಯೇ ನನ್ನ ಮನಸ್ಸಿನಲ್ಲಿ ಪ್ರಕಾಸುತ್ತಿದಾನೆ.

(೨) ಅಡಿಯೇನುಳ್ಳಾನುಡಲುಳ್ಳಾನಣ್ಡತ್ತಕತ್ತಾನ್
ಪುಱತ್ತುಳ್ಳಾನ್,
ಪಡಿಯೇ ಯಿದುವೆನ್ರುರೈಕ್ಕಲಾವನ್ ಪಡಿಯನಲ್ಲನ್ ಪರಮ್ಪರನ್,
ಕಡಿಶೇರ್‌ನಾಱ್ಱತ್ತುಳ್ಳಾಲ್ಲೈಯಿನ್ಪತ್ತುನ್ಪಕ್ಕಶಿನೇರ್ಕ್ಕಿಲ್,
ಒಡಿಯಾವಿನ್ಪ ಪ್ಪೆರುಮೈಯೋನುಣರ್ವಿಲುಮ್ಪರೊರುವನೇ.

ಪ್ರ॥ ಅಣ್ಡತ್ತು-ಅಣ್ಡದಲ್ಲಿರುವ ಎಲ್ಲಾ ವಸ್ತುಗಳಿಗೂ, ಅಕತ್ತಾ-ಅನ್ತರಾತ್ಮನಾಗಿ, ಪುಱತ್ತು-ಬಾಹ್ಯವಾದ ಅವ್ಯಕ್ತ ಮಹದಹಙ್ಕಾರಗಳಿಗೂ, ಉಳ್ಳಾ-ಅನ್ತಃ ಪ್ರವಿಷ್ಟನಾಗಿ, ಇದುವೇಪಡಿ – ಇದೇ ಪ್ರಕಾರ, ಎನ್ಱು–ಎಂದು, ಉರೈಕ್ಕಲಾಮ್ ಪಡಿಯ್ಯ ಅಲ್ಲ–ವರ್ಣನೀಯವಾದ ಪ್ರಕಾರವುಳ್ಳವನಲ್ಲದವನಾಗಿ, ಪರಮ್ಪರ–ಪರರಾದ ನಿತ್ಯಮುಕ್ತರಿಗೂ ಮೇಲಾದವನಾಗಿ, ಕಡಿನಾಱುಮ್‌ಶೀರ್-ವಿಲಕ್ಷಣಗನ್ಧಗಳೊಡನೆ ಕೂಡಿದ, ಅಲೈಯುಳ್–ಮಧುವಿನಲ್ಲಿರುವ (ಸುಗನ್ಧ ದ್ರವ್ಯದಲ್ಲಿರುವ,) ಇನ್ಬ - ಸುಖದ, ತುನ್ಬ–ಅಲ್ಪಾಸ್ಥಿರತ್ವಗಳಿಂಟ ದುಃಖದ, ಕೞಿ–ನಾಶವುಳ್ಳ, ನೇರ್ಮೈ-ಸೂಕ್ಷ್ಮವಾದ ಸುಖಾಂಶದ, ಒಡಿಯಾ-ಅವಿಚ್ಛಿನ್ನವಾದ, ಇನ್ಬ-ಆನನ್ದದ, ಪೆರುಮೈಯೋ–ಮಹತ್ತ್ವವುಳ್ಳವನಾಗಿ, ಉಣರ್ವಿಲ್–ಜ್ಞಾನದಲ್ಲಿ, ಉಮ್ಬರ್ ಒರುವನೇ–ಮೇಲೆ ಇರುವ ಅದ್ವಿತೀಯನಾಗಿರುವವನೇ, ಅಡಿಯೇ ಉಳ್ಳಾ–ನನ್ನ ಅನ್ತರಾತ್ಮನಾಗಿದಾನೆ. ಉಡಲ್ ಉಳ್ಳಾ – (ಹೇಯವಾದ) ನನ್ನ ಶರೀರದಲ್ಲೂ ಹೃದಯಾನ್ತರ್ವರ್ತಿಯಾಗಿದಾನೆ.

( ಸ–ಗಾ–ರ ‖ )—

ಅಣ್ಡಾನ್ತಶ್ಚ ಬಹಿಶ್ಚ ಶಾಸ್ತಿ ಸಕಲಂ ಯೋಽನ್ತರ್ನಿಯನ್ತಾ ಸ್ವಯಂ
ದುರ್ವರ್ಣ್ಯಶ್ಚ ಪರಾತ್ಪರಃ ಪರಿಮಳಾನನ್ದಾನುಭೂತೇರಪಿ ।
ನಿಸ್ಸೀಮಾಮೃತವಾರಿಧಿಶ್ಚ ವಿಶದಜ್ಞಾನಾಮೃತಾಮ್ಭೋನಿಧಿ–
ರ್ದೇವಾನಾಂ ಪತಿರೇಕ ಏವ ಹೃದಯೇ ಮೇ ಭಾತಿ ಚಾತ್ಮನ್ಯಪಿ ‖

ತಾ॥ ಅಣ್ಡಾನ್ತರ್ವರ್ತಿ ಸಕಲ ಪದಾರ್ಥಾನ್ತರ್ಯಾಮಿಯಾಗಿಯೂ, ಅವ್ಯಕ್ತ ಮಹದಹಙ್ಕಾರಾದಿ ಸಕಲಬಾಹ್ಯಪದಾರ್ಥಾನ್ತಃ ಪ್ರವಿಷ್ಟನಾಗಿಯೂ, ಅವರ್ಣನೀಯಪ್ರಕಾರನಾಗಿಯೂ, ಪರಾತ್ಪರನಾಗಿಯೂ, ಸಕಲ ಸುಗನ್ಧವಸ್ತುಗಳ ಸೂಕ್ಷ್ಮಾಂಶವಾದ ಸುಖದ ಅವಿಚ್ಛಿನ್ನಾನನ್ದ ಮಹತ್ತ್ವವುಳ್ಳವನಾಗಿಯೂ ಅದ್ವಿತೀಯಜ್ಞಾನನಿಧಿಯಾಗಿಯೂ ಇರುವವನೇ ನನ್ನ ಅನ್ತರಾತ್ಮನಾಗಿದಾನೆ. ನನ್ನ ಶರೀರದಲ್ಲೂ ಹೃದಯಾನ್ತರ್ವರ್ತಿಯಾಗಿದಾನೆ.

(೩) ಉಣರ್ವಿಲುಮ್ಬರೊರುವನ್ನೈ ಯವನದರುಳಾಲುಱಲ್
ಪ್ಪೊರುಟ್ಟು, ಎನ್
ಉಣರ್ವಿನುಳ್ಳೇ ಯಿರುತ್ತಿನೇನದುವುಮವನದಿನ್ನರುಳೇ,
ಉಣರ್ವುಮುಯಿರುಮುಡಮ್ಬುಮ್
ಮತ್ತುಲಪ್ಪಿಲನವುಮ್ ಪಳುದೇಯಾಮ್,
ಉಣರ್ವೈಪ್ಪೆಱವೂರ್ನ್ದುಇಱವೇತ್ತಿ ಯಾನುಮ್
ತಾನಾಯೊಳಿನ್ದಾನೇ.

ಪ್ರ॥ ಉಣರ್ವಿಲ್-ದಿವ್ಯಜ್ಞಾನಾಧಿಕ್ಯವುಳ್ಳ, ಉಮ್ಬರ್ – ನಿತ್ಯಸೂರಿಗಳಿಗೆ, ಒರುವನ್ನೈ-ಅದ್ವಿತೀಯ ನಿರ್ವಾಹಕನನ್ನು, ಅವನದು ಅರುಳಾಲ್-ಅವನ ಕೃಪೆಯಿಂದ, ಉಱಲ್ಪೊರುಟ್ಟು – ಹೊಂದುವುದಕ್ಕಾಗಿ, ಎನ್ ಉಣರ್ವಿನ್ ಉಳ್ಳೇ-ನನ್ನ ಜ್ಞಾನದೊಳಗೆ, ಇರುತ್ತಿನೇನ್-ಇಟ್ಟೆನು. ಅದುವುಮ್ – ಆ ಇಚ್ಛೆಯೂ, ಅವನದು ಇನ್ ಅರುಳೇ – ಅವನ ನಿರ್ಹೇತುಕ ಕೃಪೆಯಿಂದ ಉಂಟಾದುದೇ. ಉಣರ್ವುಮ್ – ಜ್ಞಾನಸಮೃದ್ಧಿಯೂ, ಉಯಿರುಮ್ – ಪಞ್ಚಪ್ರಾಣಗಳೂ, ಉಡಮ್ಬುಮ್-ಶರೀರವೂ, ಮತ್ತು-ಮತ್ತು, ಉಲಪ್ಪು ಇಲನವುಮ್-ಅಸಂಖ್ಯಾತವಾದ ಮಹದಹಂಕಾರೇನ್ದ್ರಿಯಾದಿಗಳೂ, ಪಳುದೇ ಆಮ್ – ಹೇಯವಾಗುವುವೆಂಬ, ಉಣರ್ವೈಪ್ಪೆಱ – ಜ್ಞಾನವನ್ನು ಹೊಂದಲು, ಊರ್ನ್ದು – ನಡೆಸಿ, ಇಱವೇತ್ತಿ-ಆತ್ಮಪರ್ಯನ್ತವಾಗಿ ಹತ್ತಿ, ಯಾನುಮ್-ನಾನೂ, (ಅಹಂಬುದ್ಧಿವ್ಯವಹಾರವೂ), ತಾನ್ ಆಯ್ ಒಳಿನ್ದಾನೇ-ಸ್ವವಿಷಯವಾಗುವಂತೆ ಆತ್ಮಪ್ರಕಾರವಿಶಿಷ್ಟನಾಗಿ ಬಿಟ್ಟನಪ್ಪೆ!

( ಸ–ಗಾ–ರ ॥ )—

ಸೂರೀಣಾಂ ಪತಿಮಪ್ರಮೇಯಮಪಿ ತಂ ಪ್ರಾಪ್ತುಂ ಪ್ರಸಾದಾದಹಂ
ತಸ್ಯೈವಾದ್ಯ ಕರೋಮಿ ತಂ ಮಮ ಹೃದೀತ್ಯೇಷಾ ಕೃಪಾ ಚಾಸ್ಯಹಿ |
ಬುದ್ಧಿ-ಪ್ರಾಣ-ಶರೀರಮುಖ್ಯಮಖಿಲಂ ಚಾನ್ಯತ್ತು ಹೇಯಂ ಭವೇ-
ದಿತ್ಯೇವಂ ವಿಶದಾಂ ಮತಿಂ ಚ ಜನಯನ್ನಾತ್ಮಾಽಪಿ ಮೇ ಹ್ಯಾತ್ಮಯಮ್ ॥

ತಾ॥ ದಿವ್ಯಜ್ಞಾನಾಧಿಕ್ಯವುಳ್ಳ ನಿತ್ಯಸೂರಿಗಳಿಗೆ ನಿರ್ವಾಹಕನಾದ ಸ್ವಾಮಿಯನ್ನು ಅವನ ಕೃಪೆಯಿಂದ ನನ್ನ ಜ್ಞಾನದೊಳು ಇಟ್ಟೆನು. ಅದೂ ಅವನ ನಿರ್ಹೇತುಕ ಕೃಪೆಯಿಂದಲೇ. ಅವನು ನನ್ನ ಜ್ಞಾನವಿಶೇಷ-ಪಞ್ಚಪ್ರಾಣ-ಶರೀರ— ಅಸಂಖ್ಯಾತ ಮಹದಹಂಕಾರೇನ್ದ್ರಿಯಾದಿ ಗಣಗಳೆಲ್ಲಾ ಹೇಯವಾಗುವುವೆಂಬ ದಿವ್ಯಜ್ಞಾನವನ್ನು ಉಂಟುಮಾಡಿ, ನನ್ನ ಆತ್ಮಪರ್ಯನ್ತವಾಗಿ ತಾನೇ ಹತ್ತಿ ನಾನು ಎಂಬ ವಸ್ತುವೂ ತಾನೇ ಆಗಿ (ನನಗೆ ಪ್ರಕಾರಿಯಾಗಿ) ಬಿಟ್ಟನು.

(೪ ಯಾನುಮ್ ತಾನಾಯ್ಯೊಳಿನ್ದಾನೈ ಯಾದುಮ್
ಯವರ್ಕ್ಕುಮ್ ಮುನ್ನೋನೈ,
ತಾನುಮ್ ಶಿವನುಮ್ ಪಿರಮನುಮಾಕಿ ಪ್ಪಣೈತ್ತ
ತನಿಮುದಲ್ಯೈ,
ತೇನುಮ್ ಪಾಲುಮ್ ಕನ್ನಲುಮಮುದುಮಾಕಿ
ತ್ತಿತ್ತಿತ್ತು, ಎನ್
ಊನಿಲುಯಿರಿಲುಣರ್ವಿನಿಲ್ ನಿನ್ರ ವೊನ್ರೈ
ಯುಣರ್ನ್ದೇನೇ.

ಪ್ರ|| ಯಾದುಮ್ ಯವರ್ಕ್ಕುಮ್ – ಸಕಲವಿಧವಾದ ಅಚೇತನಗಳಿಗೂ ಚೇತನರಿಗೂ, ಮುನ್ನೋನೈ – ಕಾರಣಭೂತನನ್ನು, ತಾನುಮ್ ಶಿವನುಮ್ ಪಿರಮನುಮ್ ಆಕಿ-ತಾನೂ ರುದ್ರನೂ ಬ್ರಹ್ಮನೂ ಆಗಿ, ಪಣೈತ್ತ-ವಿಸ್ತೀರ್ಣವಾದ, ತನಿಮುದಲ್ಯೈ – ಪ್ರಧಾನಕಾರಣವಸ್ತುವಾದವನನ್ನು, ತೇನುಮ್ ಪಾಲುಮ್ ಕನ್ನಲುಮ್ ಅಮುದುಮಾಕಿ-ಜೇನುತುಪ್ಪವೂ ಹಾಲೂ ಕಬ್ಬಿನರಸವೂ ಅಮೃತವೂ ಎಂದು ಸ್ವೀಕರಿಸಿ, ತಿತ್ತಿತ್ತು–ಭೋಗ್ಯವಾಗಿ, ಎನ್ ಊನಿಲ್–ನನ್ನ ಶರೀರದಲ್ಲೂ, ಉಯಿರಿಲ್–ಪ್ರಾಣದಲ್ಲೂ, ಉಣರ್ವಿನಿಲ್-ಜ್ಞಾನದಲ್ಲೂ, ನಿನ್ರ-ನಿಂತ, ಒನ್ರೈ–ನನ್ನ ಆತ್ಮನಿಗೆ ಅನ್ತರಾತ್ಮನಾದ ಅದ್ವಿತೀಯನನ್ನು, ಯಾನುಮ್ ತಾನಾಯ್ ಒಳಿನ್ದಾನೈ-ನಾನೂ ತಾನೇ ಆಗಿಬಿಟ್ಟಿರುವವನನ್ನು, ಉಣರ್ನ್ದೇನ್–ತಿಳಿದುಕೊಂಡೆನು.

( ಸ–ಗಾ–ರ || )—

ಜೀವಾಜೀವಸಮಸ್ತಮೂಲಮುಪಿ ತಂ ವಿಷ್ಣುಂ ಶಿವಾಬ್ಜಾಸನಾ-
ದ್ಯಾತ್ಮಾನಂ ಪ್ರಥಮಂ ಸುಧಾರಸ-ಮಧು-ಕ್ಷೀರೇಕ್ಷುಸಾರಾತ್ಮಕಮ್ |
ಬುದ್ಧಿ-ಪ್ರಾಣ-ಶರೀರಗಂ ಮಮ ಹರಿಂ ಚಾತ್ಮಾನ್ತರಾತ್ಮಾನಮ-
ಪ್ಯೇವಂ ಗುಪ್ತಮಿಮಂ ಮಯಾಹ ವಿಶದಂ ವೇದ್ಮಿ ಸ್ವಯಂ ಶ್ರೀಧರಮ್||

ತಾ|| ಸಕಲವಿಧ ಚೇತನಾಚೇತನ ಪದಾರ್ಥಗಳಿಗೂ ಕಾರಣಭೂತನಾಗಿಯೂ, ಬ್ರಹ್ಮ ವಿಷ್ಣು ಶಿವಾತ್ಮಕವಾದ ಮೂಲಕಾರಣ ವಸ್ತುವಾಗಿಯೂ ಇರುವವನನ್ನು ಮಧುಕ್ಷೀರೇಕ್ಷುಸಾರಸುಧಾರಸಾತ್ಮಕವೆಂದು ಸ್ವೀಕರಿಸಿ, ನನ್ನ ಶರೀರದಲ್ಲೂ ಪ್ರಾಣದಲ್ಲೂ ಜ್ಞಾನದಲ್ಲೂ ಭೋಗ್ಯವಾಗಿ ನಿಂತು ನನ್ನ ಅನ್ತರಾತ್ಮನಾಗಿ ತಾನೇ ಎಂಬಂತೆ ಆಗಿರುವವನನ್ನು ನಾನು ತಿಳಿದುಕೊಂಡೆನು.

(೫) ನಿನ್ಱವೊನ್ಱಿ ಯುಣರ್ನ್ದೇನುಕ್ಕದನುಳ್ ನೇರ್ಮೈ
ಯದುವಿದುವೆನ್ಱು,
ಒನ್ಱುಮೊರುವರ್ಕ್ಕುಣರಲಾಕಾದುಣರ್ನ್ದು
ಮೇಲುಮ್ ಕಾಣ್ಬರಿದು,
ಶೆನ್ಱುಶೆನ್ಱು ಪರಮ್ಪರಮಾಯ್ ಯಾದುಮಿನ್ಱಿ
ತೇಯ್ನ್ದಱ್ಱು,
ನನ್ಱು ತೀದೆನ್ಱಱಿವರಿದಾಯ್ ನನ್ಱಾಯ್ ಞಾನಮ್ ಕಡನ್ದದೇ.

ಪ್ರ॥ ನಿನ್ಱ ಒನ್ಱೈ-ನಿತ್ಯವಾಗಿ ನಿಂತ ಆತ್ಮವಸ್ತುವನ್ನು, ಉಣರ್ನ್ದೇನುಕ್ಕು-ತಿಳಿದ ನನಗೆ, ಅದನುಳ್‌ನೇರ್ಮೈ-ಅದರೊಳಗಿನ ಸೂಕ್ಷ್ಮವೈಲಕ್ಷಣ್ಯವು, ಒನ್ಱುಮ್-ಒಂದು ಪ್ರಕಾರದಲ್ಲೂ, ಒರುವರ್ಕ್ಕು-ಜ್ಞಾನಾಧಿಕರಿಗೂ, ಅದು ಇದು ಎನ್ಱು-ಅದು ಇದೇಯೆಂದು, ಉಣರಲಾಕಾದು-ತಿಳಿಯಲಾಗುವುದಿಲ್ಲ; ಉಣರ್ನ್ದುಮ್-ತಿಳಿದಾಗ್ಯೂ, ಮೇಲುಮ್-ಮತ್ತೂ, ಕಾಣ್ಬು ಅರಿದು-ನೋಡೋಣವು ಅಶಕ್ಯವಾಗಿ, ಪರಮ್ಪರಮಾಯ್ – ಒಂದಕ್ಕೊಂದು ಮೇಲಾಗಿ, ಶೆನ್ಱು ಶೆನ್ಱು – ಹೋಗಿ ಹೋಗಿ, ಯಾದುಮ್ ಇನ್ಱಿ – ಅದರ ವಿಕಾರರೂಪವು ಯಾವುದೂ ಇಲ್ಲದೆ, ತೇಯ್ನ್ದು- ಅತಿ ಸೂಕ್ಷ್ಮವಾಗಿ, ಅಱ್ಱು- ಅದರ ಸಮ್ಬನ್ಧವು ನಷ್ಟವಾಗಿ, ನನ್ಱು-ತೀದು ಎನ್ಱು-ಒಳ್ಳೇದು ಕೆಟ್ಟದ್ದು ಎಂದು, ಅಱಿವು ಅರಿದಾಯ್-ತಿಳಿಯೋಣವು ಅಸಾಧ್ಯವಾಗಿ, ನನ್ಱಾಯ್-ಜ್ಞಾನಾನನ್ದವೈಲಕ್ಷಣ್ಯವುಳ್ಳದುದಾಗಿ, ಞಾನಮ್ – ಅವುಗಳ ಇನ್ದ್ರಿಯಜ್ಞಾನಕ್ಕೆ, ಕಡನ್ದದೇ-ವಿಷಯವಲ್ಲದೇ ಹೋಯಿತು.

( ಸ–ಗಾ–ರ ॥ )—

ಆತ್ಮಜ್ಞಾನವತೋಽಪಿ ಮೇ ನ ವಿಲಸೇತ್ ಸೂಕ್ಷ್ಮಸ್ವರೂಪಂ ಚ ತತ್
ಪ್ರಾಜ್ಞಾನಾಮಪಿ ದುರ್ಗಮಂ ಹಿ! ವಿಶದಜ್ಞಾನೇಽಪಿ ದುರ್ದರ್ಶತಾ ।
ಏವಂ ಚೇದಮುಪರ್ಯುಪರ್ಯಪಿ ಮಹಾಗೂಢಂ ಸುಸೂಕ್ಷ್ಮಂ ಭವೇ-
ತ್ತತ್ತದ್ದೋಷಗುಣಾದ್ಯತೀತಮಮಲಜ್ಞಾನಾತ್ಮಕಂ ದುರ್ಗ್ರಹಮ್ ॥

ತಾ॥ (ಆತ್ಮಜ್ಞಾನವುಳ್ಳ ನನಗೆ ಅದರೊಳಗಿನ ಸೂಕ್ಷ್ಮವೈಲಕ್ಷಣ್ಯವು ತಿಳಿಯದೇಹೋಯಿತೆಂದು ಸಾಂಖ್ಯಮತರೀತ್ಯಾ ಹೇಳುತ್ತಾರೆ) ಎಂತಹ ಜ್ಞಾನಾಧಿಕರಿಗೂ ತಿಳಿಯಲಶಕ್ಯವಾಗಿಯೂ, ತಿಳಿದಾಗ್ಯೂ ನೋಡಲಶಕ್ಯವಾಗಿ, ಮೇಲೆಮೇಲೆ ಅತಿಸೂಕ್ಷ್ಮವಾಗಿ ದುರವಗಾಹವಾಗಿ ಆತ್ಮನ ಜ್ಞಾನಾನನ್ದ ವೈಲಕ್ಷಣ್ಯವು ನನಗೆ ಇನ್ದ್ರಿಯಾತೀತವಾಗಿ ಹೋಯಿತು.

(೬) ನ್ಣಾಯ್ ಞಾನಮ್ ಕಡನ್ದುಪೋಯ್ಯ
ನಲ್ಲಿನ್ದಿರಿಯುಮೆಲ್ಲಾಮಿೞ್ತ್ತು,
ಒನ್ಣಾಯ್ ಕ್ಕಿಡನ್ದವರುಮ್ ಪೆರುಮ್ಪಾೞುಲಪ್ಪಿಲದನ್ಯೆ
ಯುಣರ್ನ್ದುಣರ್ನ್ದು,
ಶೆನ್ಣಾಙ್ಗಿನ್ಬತ್ತುನ್ಬಙ್ಗಳ್ ಶೆಱ್ಱುಕ್ಕಳೈನ್ದು ಪಶೈಯಱ್ಱಾಲ್,
ಅನ್ಣೇಯಪ್ಪೋದೇ ವೀಡದುವೇ ವೀಡುವೀಡಾಮೇ.

ಪ್ರ॥ ನ್ಣಾಯ್-ಶುದ್ಧಜ್ಞಾನದೊಡನೆ ಕೂಡಿ, ಞಾನಮ್ ಕಡನ್ದುಪೋಯ್-ವಿಷಯಜ್ಞಾನವನ್ನು ಅತಿಕ್ರಮಿಸಿ ಹೋಗಿ, ನಲ್ ಇನ್ದಿರಿಯ ಮೆಲ್ಲಾಮ್ ಈೞ್ತ್ತು-ಒಳ್ಳೇ ಇನ್ದ್ರಿಯಗಳನ್ನೆಲ್ಲಾ ಧ್ವಂಸಮಾಡಿ, ಒನ್ಣು ಆಯ್‌ಕಿಡನ್ದ-ಆತ್ಮವಸ್ತುವೊಡನೆ ಸೇರಿ ಇರುವ, ಅರುಮ್-ದಾಟಲಶಕ್ಯವಾದ, ಪೆರುಮ್-ಅಪರಿಚ್ಛಿನ್ನವಾದ, ಉಲಪ್ಪು ಇಲ್-ಅಸಂಖ್ಯಾತವಾದ, ಪಾೞ್ ಅದನ್ಯೆ-ಪ್ರಕೃತಿ ತತ್ತ್ವವನ್ನು, ಉಣರ್‌ನ್ದು ಉಣರ್‌ನ್ದು - ಶ್ರವಣಮನನಾದಿಗಳಿಂದ ಅನೇಕಾವೃತ್ತಿ ತಿಳಿದು ತಿಳಿದು, ಶೆನ್ಣು-ಹೋಗಿ, ಅಙ್ಗು-ಆ ಆತ್ಮವಿಷಯದಲ್ಲಿ, ಇನ್ಬತ್ತುನ್ಬಙ್ಗಳ್-ಸುಖದುಃಖಗಳನ್ನು, ಶೆಱ್ಱುಕ್ಕಳೈನ್ದು - ನಿರ್ಮೂಲವಾಗಿ ನಾಶಪಡಿಸಿ, ಪಶೈ ಅಱ್ಱಾಲ್ - ಅವುಗಳ ವಿಷಯವಾಸನಾರುಚಿಸಮ್ಬನ್ಧವು ನಷ್ಟವಾದರೆ, ಅನ್ಣೇ-ಆ ಕಾಲದಲ್ಲೇ, ಅಪ್ಪೋದೇ-ಆ ಕ್ಷಣದಲ್ಲೇ, ವೀಡು - ಸಕಲ ಸಂಸಾರಬನ್ಧಮೋಕ್ಷವು ಉಂಟಾಗುವುದು. ಅದುವೇ ವೀಡು-ಆ ಆತ್ಮಾನುಭವ ಮೋಕ್ಷವೂ, ವೀಡಾಮೇ-ಭಗವದನುಭವಕ್ಕೆ ಅನುಕೂಲವಾಗುವುದಷ್ಟೆ!

(ಸ-ಗಾ-ರ ॥) —

ನಾನಾಜ್ಞಾನಮತೀತ್ಯ ಶುದ್ಧಮನಸಾ ಸರ್ವೇನ್ದ್ರಿಯಾಣಾಂ ಜಯಾ-
ದ್ಭದ್ರಾರ್ಥಾರಾಮಿತ-ಸತ್ತ್ವಧಾನ-ವಿವಿಧಜ್ಞಾನಾತ್ ಸ್ವಯಂ ಚಾತ್ಮನಃ।
ನಿರ್ಮೂಲ್ಯಾಪಿ ಸುಖಂ ಚ ದುಃಖಮಖಿಲಂ ಸಙ್ಗಾಚ್ಚ ಮುಕ್ತೋ ಯದಿ
ಸ್ಯಾನ್ಮುಕ್ತಿಃ ಕ್ಷಣತಃ ಶಿಲೇಯಮಪಿ ಚ ಪ್ರಾಪ್ಯೈವ ಮುಕ್ತಿಃ ಕ್ವಚಿತ್॥

ತಾ|| ಶುದ್ಧಜ್ಞಾನದೊಡನೆ ಸೇರಿ ವಿಷಯಜ್ಞಾನಾತೀತವಾಗಿ, ಆತ್ಮವಸ್ತುವಿನೊಡನೆ ಸೇರಿ ಇರುವ ಅಪರಿಚ್ಛಿನ್ನಾಸಂಖ್ಯಾತಪ್ರಕೃತಿತತ್ತ್ವವನ್ನು ಶ್ರವಣಮನನಾದಿಗಳಿಂದ ತಿಳಿದು, ಆತ್ಮಸುಖದುಃಖಗಳನ್ನು ಧ್ವಂಸಮಾಡಿ ವಾಸನಾರುಚಿರಹಿತನಾದರೆ ಆ ಕ್ಷಣದಲ್ಲೇ ಸಂಸಾರಬನ್ಧಮೋಕ್ಷವಾಗುವುದು. ಅದೇ ಆತ್ಮಾನುಭವವೆಂಬ ಮೋಕ್ಷವು; ಅದು ಭಗವದನುಭವಕ್ಕೆ ಅನುಕೂಲವಾಗುವುದಷ್ಟೆ !

(೭) ಅದುವೇ ವೀಡುವೀಡು ಪೇಱ್ಱಿನ್ಬಮ್
ತಾನುಮದು ತೇಱಿ,
ಎದುವೇ ತಾನುಮ್ ಪಱ್ಱಿನ್ರಿ ಯಾದುಮಿಲಿಕಳಾಕಿತ್ತಿಲ್,
ಅದುವೇ ವೀಡುವೀಡು ಪೇಱ್ಱಿನ್ಬಮ್ ತಾನುಮದು
ತೇಱ್ಱಾದು,
ಎದುವೇ ವೀಡೇದಿನ್ಬಮೆನ್ರಿಯ್‌ತ್ತಾರೆಯ್‌ತ್ತಾ–
ರೆಯ್‌ತ್ತಾರೇ.

ಪ್ರ|| ಅದುವೇ–ಆ ಆತ್ಮಾನುಭವವೇ, ವೀಡು–ಮೋಕ್ಷವು. ವೀಡುಪೇಱು ಆ ಮೋಕ್ಷಲಾಭದಿಂದ ಬರುವ, ಇನ್ಬಮ್ ತಾನುಮ್ – ಸುಖವೂ ಅದೇ ಎಂದು, ತೇಱಿ–ತಿಳಿದು, ಎದುವೇ ತಾನುಮ್ – ಪ್ರಕೃತಿ ಪ್ರಾಕೃತಗಳೆಂಬ ಎಲ್ಲಾವಸ್ತುಗಳಲ್ಲೂ, ಪಱ್ಱು ಇನ್ರಿ – ಸಮ್ಬನ್ಧವಿಲ್ಲದಂತೆ, ಯಾದುಮ್ ಇಲಿಕಳಾಕಿಱ್ಕಿಲ್– ಯಾವ ರುಚಿವಾಸನೆಗಳೂ ಇಲ್ಲದವರಾದರೆ, ಅದುವೇ – ಆ ಆತ್ಮಾನುಭವವೇ, ವೀಡು–ಮೋಕ್ಷವೂ, ವೀಡುಪೇಱು–ಮೋಕ್ಷಲಾಭದಿಂದ ಉಂಟಾದ, ಇನ್ಬಮ್ ತಾನುಮ್–ಆನನ್ದವೂ, ಅದು–ಅದೇ. ತೇಱ್ಱಾದು-ಹೀಗೆ ಭಗವದಾತ್ಮಕವೆಂದು ಆತ್ಮನನ್ನು ತಿಳಿಯದೆ, ಎದುವೇ ವೀಡು–ಯಾವುದು ಮೋಕ್ಷವು, ಏದು ಇನ್ಬಮ್–ಯಾವುದು ಸುಖವು, ಎನ್ರು–ಎಂದು ಎಯ್‌ತ್ತಾರ್–ಚಿತ್ತದೌರ್ಬಲ್ಯವುಳ್ಳವರು, ಎಯ್‌ತ್ತಾರ್ ಎಯ್‌ತ್ತಾರೇ–(ಗರ್ಭನರಕಗಳಿಂದ) ಕ್ಲೇಶಪಟ್ಟವರೇ.

( ಸ–ಗಾ–ರ || )—

ಮುಕ್ತಿಸ್ಸೈವ ಕಿಲಾತ್ಮಭುಕ್ತಿರಿತಿ ಯಾ! ತಸ್ಯಾಃ ಫಲಂ ಸ್ಯಾತ್ಸುಖಂ
ಚೇತ್ಯೇವಂ ಹಿ ವಿದನ್ ಯದಿ ಪ್ರಕೃತಿಸಙ್ಗಾದ್ಯೈರ್ವಿಹೀನಸ್ಸ್ವಯಮ್ |
ಸಾ ಮುಕ್ತಿಃ ಕಿಲ ಮುಕ್ತಿರೇವ ಚ ಫಲಂ ಚ ಸ್ಯಾತ್ಸುಖಂ! ತದ್ವಿನಾ
ಕಾ ಮುಕ್ತಿಃ ಕಿಮು ತತ್ಫಲಂ ತ್ವಿತಿ ಮನೋಭ್ರಾನ್ತ್ಯಾ ಪತನ್ತ್ಯೇವ ಹಿ ||

ತಾ|| ಆತ್ಮಾನುಭವರೂಪವಾದ ಮೋಕ್ಷವೇ ಮೋಕ್ಷವು, ಅದರಿಂದ ಉಂಟಾಗುವ ಸುಖವೂ ಅದೇ ಎಂದು ತಿಳಿದು ಪ್ರಕೃತಿ ಪ್ರಾಕೃತ ಸಮ್ಬನ್ಧರಹಿತರಾದರೆ, ಅದೇ ಆ ಮೋಕ್ಷವೂ, ಆ ಆನನ್ದವೂ. (ಯಾವುದು ಮೋಕ್ಷವೋ ಯಾವುದು ಆನನ್ದವೋ—ಎಂದು ಭ್ರಾನ್ತರಾದವರು ಗರ್ಭನರಕಾದಿಗಳಿಂದ ಕ್ಲೇಶಪಟ್ಟವರೇ.)

(೮) ಎಯ್ತ್ತಾರೆಯ್ತ್ತಾರೆಯ್ತ್ತಾರೆನ್ಱಿಲ್ಲತ್ತಾರುಮ್
ಪುಱತ್ತಾರುಮ್,
ಮೊಯ್ತ್ತು, ಅಙ್ಗಲಱಿ ಮೆಯ್ಯಜ್ಗ ತಾಮ್
ಪೋಕುಮ್ಪೋದು, ಉನ್ಮತ್ತರ್ಪೋಲ್,
ಪಿತ್ತೇಱಿ ಯೆನುರಾಗಮ್ ಪೊಙ್ಗಿಯುಮ್ ಪೋದೆಮ್
ಪೆಮ್ಮಾನೋ
ಡೊತ್ತೇ ಶೆನ್ಱು, ಅಙ್ಗುಳ್ಳಮ್ ಕೂಡಕ್ಕೂಡಿಱ್ಱಾಕಿಲ್
ನಲ್ಲುತ್ತ್ಯಪ್ಪೇ.

ಪ್ರ|| ಎಯ್ತ್ತಾರ್-ಅಶಕ್ತರಾದರು, ಎಯ್ತ್ತಾರ್ - ಇನ್ದ್ರಿಯವಿಷಯಗಳನ್ನು ಗ್ರಹಿಸಲಾರದೆಹೋದರು, ಎಯ್ತ್ತಾರ್-ಉಸುರುಬಿಡುವುದಕ್ಕೂ ಆಗದೆ ಹೋದರು, ಎನ್ಱು-ಎಂದು, ಇಲ್ಲತ್ತಾರುಮ್ - ಗೃಹವಾಸಿಗಳಾದ ಬನ್ಧುಜನರೂ, ಪುಱತ್ತಾರುಮ್ – ಹೊರಗೆ ಇರುವ ಜನರೂ, ಮೊಯ್ತ್ತು-ಸೇರಿ, ಅಙ್ಗು – ಆ ಅವಸ್ಥೆಯಲ್ಲಿ, ಅಲಱಿ-ಮೊರೆಯಿಟ್ಟು, ಮೆಯ್ಯಜ್ಗ – ಮೇಲೆ ಬೀಳಲು, ತಾಮ್ ಪೋಕುಮ್ಪೋದು – ತಾವು ಹೋಗುವ ಅವಸ್ಥೆಯಲ್ಲಿ, ಉನ್ಮತ್ತರ್ಪೋಲ್ – ಹುಚ್ಚುಹಿಡಿದವರಂತೆ, ಪಿತ್ತೇಱಿ-ಭ್ರಾನ್ತಿಯಿಂದ, ಅನುರಾಗಮ್ ಪೊಙ್ಗಿಯುಮ್ ಪೋದು – ಪ್ರೀತಿಯು ಅಧಿಕವಾಗಿ ಬೆಳೆಯುವ ಸಮಯದಲ್ಲಿ, ಎಮ್ ಪೆಮ್ಮಾನೋಡು-ನನ್ನಸ್ವಾಮಿಯೊಡನೆ, ಒತ್ತೇಶೆನ್ಱು – ಸಮಾನವಾಗಿ ಹೋಗಿ, ಅಙ್ಗು-ಅವನಪಕ್ಕದಲ್ಲಿ, ಉಳ್ಳಮ್-ತನ್ನಮನಸ್ಸು, ಕೂಡಕ್ಕೂಡಿಱ್ಱಾಕಿಲ್-ಕೂಡಹೋಗಿ ಸೇರುವುದಾದರೆ, ನಲ್ ಉತ್ತ್ಯಪ್ಪೇ- ಒಳ್ಳೇ ನಿಷ್ಕರ್ಷವೇಸರಿ.

( ಸ-ಗಾ-ರ || )—

**ಹಾ! ಹಾ! ಹನ್ತ ಪತನ್ತಿ ಚೇತಿ ಶಿಥಿಲಾನ್ಯೇವೇನ್ದ್ರಿಯಾದೀನ್ಯಹೋ!**
**ದೃಷ್ಟ್ವಾತ್ರ ಗೇಹನಿವಾಸಿನೋಽಪಿ ಯುಗಪದ್ಬಾಹ್ಯಾಶ್ಚ ದುಃಖಾಕುಲಾಃ |**
**ಕ್ರನ್ದನ್ತ್ಯೇವ ಯದಾ ತದೋತ್ಕ್ರಮದಶಾಂ ಪ್ರಾಪ್ತಸ್ಯ ಚೋನ್ಮತ್ತವತ್**
**ತೇಷು ಸ್ನೇಹಪರಂ ಮನೋ ಮಮ ಹರೌ ಸಕ್ತಂ ಯದಿ ಸ್ಯಾದ್ವರಮ್ ||**

